

502

# ಗಂಗಾಧರ ಮಡಿವಾಳೇಶ್ವರ ತುರಮರಿ

ದು. ನಿಂ. ಬೆಳಗಲಿ









ಐಬಿಎಚ್ ಪ್ರಕಾಶನ
ಗಾಂಧಿನಗರ ಬೆಂಗಳೂರು 560 009

GANGADHARA MADIVALESWARA TURAMARI — a life sketch of Gangadhara Madivaleswara Turamari written by D. N. Belagali and Published by G. K. Ananthram for IBH Prakashana, Gandhinagar, Bangalore 560 009.



ಬೆಲೆ ರೂ. 2-00





ಚಿತ್ರಗಳು : ಸೂರಿ



ಮೊದಲನೆಯ ಮುದ್ರಣ : 1983. ಪ್ರಕಾಶಕರು : ಐಬಿಎಚ್ ಪ್ರಕಾಶನ ಇವರ ಪರವಾಗಿ ಜಿ. ಕೆ. ಅನಂತರಾಮ್, ಐದನೆಯ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು–560 009 ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರ್, ಬೆಂಗಳೂರು 560 054.

Paper used for Printing this book was made available by the Government of India at concessional rate.



# ಗಂಗಾಧರ ಮಡಿವಾಳೇಶ್ವರ ತುರಮರಿ

## ಕಳೆದ ಶತಮಾನದ ಕನ್ನಡದ ಸ್ಥಿತಿ

ಕಳೆದ ಶತಮಾನದ ಮಧ್ಯ ಉತ್ತರ ಕರ್ನಾಟಕದಲ್ಲಿ ಕನ್ನಡ ಭಾಷೆಯ ಸ್ಥಿತಿ ತೀರ ಶೋಚನೀಯವಾಗಿತ್ತು. ಅಲ್ಲಲ್ಲಿ ಒಂದಿಷ್ಟು ಜೀವ ಹಿಡಿದು ಕೊಂಡು ಬದುಕಿದಂತಿತ್ತು. 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರೆಯುವ ಪೂರ್ವದಲ್ಲಿ, ಹಾಗೂ 1956ರಲ್ಲಿ ಕರ್ನಾಟಕ ರಾಜ್ಯವಾಗುವುದಕ್ಕಿಂತ ಮೊದಲು ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ಧಾರವಾಡ, ಕಾರ ವಾರ, ಬೆಳಗಾವಿ ಹಾಗೂ ಬಿಜಾಪುರ ಇವು ಮುಂಬಯಿ ಇಲಾಖೆಗೆ ಸೇರಿ ಕೊಂಡಿದ್ದವು. ಕಳೆದ ಶತಮಾನದ ಮಧ್ಯಭಾಗದಲ್ಲಿ ಕಲಾದಗಿಯು ಜಿಲ್ಲಾ ಕೇಂದ್ರವಾಗಿದ್ದು ಅದು ಮುಂದೆ ಬಿಜಾಪುರಕ್ಕೆ ಸ್ಥಳಾಂತರವಾಯಿತು. ಮೊದಲು ಕಾರವಾರಕ್ಕೆ 'ಕೆನರಾ' ಎಂದು ಕರೆಯುತ್ತಿದ್ದರು.

ನೂರಾರು ವರ್ಷಗಳಿಂದ ಉತ್ತರ ಕರ್ನಾಟಕದಲ್ಲಿ ಉತ್ತರ ಗಡಿಭಾಗದ ಮರಾಠಿ ಭಾಷೆಯೇ ಪ್ರಾಧಾನ್ಯತೆ ಪಡೆದಿತ್ತು. ದೇಶದ ಸ್ವಾತಂತ್ರ್ಯಕ್ಕೆ ಮೊದಲು ಉತ್ತರ ಕರ್ನಾಟಕದ ಅನೇಕ ಭಾಗಗಳಲ್ಲಿ ಮರಾಠಿ ಅರಸರು ಆಳುತ್ತಲಿದ್ದು, ಅವರು ಅಲ್ಲಿನ ಪ್ರಜೆಗಳ ಕನ್ನಡ ಮಾತೃಭಾಷೆಯನ್ನು ಕಡೆಗಣಿಸಿ, ತಮ್ಮ ಭಾಷೆಯಾದ ಮರಾಠಿಯನ್ನೇ ಬಲಾತ್ಕಾರಪೂರ್ವಕ ಹೇರುತ್ತಿದ್ದರು.

ಉತ್ತರ ಕರ್ನಾಟಕದ ಬಹುಭಾಗವನ್ನು ಮರಾಠಿ ಅರಸರಾದ ಪೇಶ್ವೆಯವರು ತಮ್ಮ ಮಾಂಡಲಿಕರಿಗೆ ಹಂಚಿಕೊಟ್ಟಿದ್ದರು. ಮುಂದೆ ಸ್ವತಂತ್ರರಾದ ಈ ಎಲ್ಲ ಸಾಮಂತ ಅರಸರು ಮರಾಠಿ ಮಾತೃಭಾಷೆಯುಳ್ಳ ವರೇ ಆಗಿದ್ದರು. ಹೀಗಾಗಿ ಇವರೆಲ್ಲ ತಮ್ಮ ಸಂಸ್ಥಾನಗಳಲ್ಲಿ ಮರಾಠಿಯನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಮಾಡಿದ್ದರು.

ಕನ್ನಡಿಗರು ಕೂಡ ಮರಾಠಿ ಭಾಷೆಯನ್ನು ಕಲಿಯುವುದು, ಅದರಲ್ಲಿಯೇ ವ್ಯವಹರಿಸುವುದು ಒಂದು ಬಗೆಯ ಗೌರವವೆಂದು ಭಾವಿಸಿದ್ದರು. ಕನ್ನಡ ಮಾತೃಭಾಷೆಯ ಬಗೆಗೆ ಬಹಳಷ್ಟು ಜನರಲ್ಲಿ ಅಭಿಮಾನ ಮೂಡಿರಲಿಲ್ಲ. ಆಳರಸರನ್ನು ಸಂತೋಷಗೊಳಿಸಲು ಅವರ ಭಾಷೆಯನ್ನೇ ಕಲಿತು, ಮಾತನಾಡುವುದು ಅಭಿಮಾನವೆಂದು ತಿಳಿದಿದ್ದರು.

ಕಳೆದ ಶತಮಾನದ ಉತ್ತರಾರ್ಧದಲ್ಲಿ ಕೆಲವು ಜನ ಸ್ವಾಭಿಮಾನಿ ಕನ್ನಡಿಗರು ಕನ್ನಡಭಾಷೆಯ ಉದ್ಧಾರಕ್ಕಾಗಿ ಟೊಂಕಕಟ್ಟಿ ನಿಂತರು. ಅದಕ್ಕೂ ಪೂರ್ವದಲ್ಲಿ ಕೆಲವು ಜನ ಆಂಗ್ಲ ಅಧಿಕಾರಿಗಳು ಕನ್ನಡಿಗರು ತಮ್ಮ ಮಾತೃಭಾಷೆಯಲ್ಲಿಯೇ ಶಿಕ್ಷಣ ಪಡೆಯಬೇಕೆಂದು ಪ್ರಚುರಪಡಿಸಿದ್ದು ಒಂದು ವಿಶೇಷ.

ಧಾರವಾಡ ವಿಭಾಗಕ್ಕೆ ಸಹಾಯಕ ಜಿಲ್ಲಾಧಿಕಾರಿಯಾಗಿ ಬಂದ ವಾಲ್ಟರ್ ಎಲಿಯಟ್ ಅವರು 1826ರಲ್ಲಿ ಧಾರವಾಡದಲ್ಲಿ ಸರಕಾರವು ಒಂದು ಮರಾಠಿ ಶಾಲೆಯನ್ನು ಆರಂಭಿಸಿದಾಗ ಪ್ರತಿಭಟಿಸಿದ್ದರು. ಎಲಿಯಟ್ ಅವರು "ಇಲ್ಲಿಯ ಪ್ರಜೆಗಳ ಮಾತೃಭಾಷೆ ಕನ್ನಡ. ಮಾತೃಭಾಷೆಯಲ್ಲಿಯೇ ಶಿಕ್ಷಣ ಸಾಗಬೇಕಾದುದು ನ್ಯಾಯ" ಎಂದು ಅಂದಿನ ಮುಂಬಯಿ ಸರಕಾರಕ್ಕೆ ವರದಿ ಮಾಡಿದರು. ಇವರೇ 1831ರಲ್ಲಿ ಒಂದು ಕನ್ನಡ ಶಾಲೆಯನ್ನು ಆರಂಭಿಸಿ, 1833ರವರೆಗೆ ಅದರ ವೆಚ್ಚವನ್ನು ಸ್ವಂತ ನಿರ್ವಹಿಸಿದ್ದರು.

ಮುಂಬಯಿ ಪ್ರಾಂತ್ಯದ ದಕ್ಷಿಣ ವಿಭಾಗಕ್ಕೆ ಶಿಕ್ಷಣಾಧಿಕಾರಿಗಳಾಗಿ ವಿಲಿಯಮ್ ಅಲೆನ್ ರಸೆಲ್ ಅವರು 1864ರಲ್ಲಿ ಬಂದರು. ಮುಂಬಯಿ ಇಲಾಖೆಯ ದಕ್ಷಿಣ ವಿಭಾಗ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳನ್ನು ಒಳಗೊಂಡಿತ್ತು. ರಸೆಲ್ ಉತ್ತರ ಕರ್ನಾಟಕ ಭಾಗದಲ್ಲಿ ಕನ್ನಡವನ್ನು ಬೆಳೆಸುವ ಕಾರ್ಯಕ್ರಮ ಹಾಕಿಕೊಂಡರು. ಕರ್ನಾಟಕದಲ್ಲಿ ಕನ್ನಡಕ್ಕೆ ಪ್ರಥಮ ಸ್ಥಾನವಿರಬೇಕೆಂದು ಮೊದಲಿಗೆ ಕಂಡುಕೊಂಡವರೇ ರಸೆಲ್ ಅವರು.

ಆಗಿನ ಕನ್ನಡ ಸ್ಥಿತಿಯನ್ನು ಕುರಿತು ರಸೆಲ್ ಅವರು ಈ ರೀತಿ ವರದಿ ಮಾಡಿದ್ದಾರೆ : "......ಮರಾಠಿ, ಗುಜರಾತಿ ಭಾಷೆಗಳು ತಮ್ಮ ಭಾಗದಲ್ಲಿ ಬೇರೂರಿದಂತೆ, ಕಲಿಸಲ್ಪಡುವಂತೆ, ಕನ್ನಡ ಪ್ರದೇಶದಲ್ಲಿ ಕನ್ನಡ ಭಾಷೆಯನ್ನೇ ಕಲಿಸಲಾಗುವುದಿಲ್ಲ. ಉಳಿದ ಭಾಗಗಳಲ್ಲಿ ತಮ್ಮ ಮಾತೃಭಾಷೆಗಳಲ್ಲಿ ಸಾಕಷ್ಟು ಪಠ್ಯಗಳು ಇದ್ದು, ಶಿಕ್ಷಕರೂ ಇದ್ದಾರೆ. ಕನ್ನಡದಲ್ಲಿ ಅವುಗಳ ತಯಾರಿ ನಡೆದಿದೆ. ಇಲ್ಲಿಯ ಬಹಳಷ್ಟು ಶಿಕ್ಷಕರ ಮಾತೃಭಾಷೆ ಕನ್ನಡ

ವಿದ್ದು, ಮರಾಠಿ ಶಿಕ್ಷಕರೂ ಕೂಡ ಕನ್ನಡ ಮಾತನಾಡುತ್ತಾರೆ. ಒಂದು ದುರ್ದೈವದ ಸಂಗತಿಯೆಂದರೆ ಅನೇಕ ಕನ್ನಡಿಗರು ತಮ್ಮ ಮಾತೃಭಾಷೆ ಯನ್ನು ಚೆನ್ನಾಗಿ ಕಲಿಸಬಲ್ಲವರಾಗಿದ್ದರೂ, ಅವರಿಗೆ ಕನ್ನಡವನ್ನು ಶುದ್ಧ ರೂಪದಲ್ಲಿ ಬರೆಯಲು ಬರುವುದಿಲ್ಲ. ಶಾಲೆಯ ವ್ಯವಹಾರಗಳಲ್ಲಿ ಅನೇಕರಿಗೆ ಕನ್ನಡಕ್ಕಿಂತ ಮರಾಠಿಯೇ ಚೆನ್ನಾಗಿ ಗೊತ್ತು."

ಕನ್ನಡ ಪಠ್ಯಪುಸ್ತಕಗಳನ್ನು ರಚಿಸುವುದಕ್ಕೆ ರಸೆಲ್ ಒಂದು ವಿಭಾಗ ವನ್ನು ಆರಂಭಿಸಿದರು. ಅದರಲ್ಲಿ ವೆಂಕಟರಂಗೋಕಟ್ಟಿ ಕನ್ನಡ ಭಾಷಾಂತರ ಕಾರರಾಗಿ ಸೇರಿದರು. ಅವರ ಸಹಾಯಕರಾಗಿ ಗಂಗಾಧರ ಮಡಿವಾಳೇಶ್ವರ ತುರಮರಿ ಅವರಿದ್ದರು.

ಆಗ ಸಾಮಾನ್ಯವಾಗಿ ಇಂಗ್ಲಿಷ್ ಭಾಷೆಯಿಂದ ಪ್ರಾದೇಶಿಕ ಭಾಷೆ ಗಳಿಗೆ ಪಠ್ಯ ಪುಸ್ತಕಗಳನ್ನು ಅನುವಾದಿಸಲಾಗುತ್ತಿತ್ತು. ವ್ಯಾಕರಣ ಹಾಗೂ ಕಾವ್ಯ ವಿಭಾಗಗಳು ಮೂಲ ಪ್ರಾದೇಶಿಕ ಭಾಷೆಗಳಿಂದ ಆರಿಸಲ್ಪಡುತ್ತಿದ್ದವು. ಕನ್ನಡ ಪಠ್ಯಗಳು ಮರಾಠಿಯಿಂದ ಅನುವಾದವಾಗುತ್ತಿದ್ದವು.

## ಜನನ : ಮೂಲಮನೆತನ

ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಬೆಳಗಾವಿ ಜಿಲ್ಲೆಯ ಬೈಲುಹೊಂಗಲದವರು. ಬೈಲುಹೊಂಗಲ ಮೊದಲು ಸಂಪಗಾಂವಿ ತಾಲ್ಲೂಕಿ ನಲ್ಲಿದ್ದು, ಈಗ ಇದೇ ತಾಲ್ಲೂಕ್ ಕೇಂದ್ರವಾಗಿದೆ. ತುರಮರಿ ಅವರ ಜನನ 1827ರಲ್ಲಿ ಆಯಿತು. ಇವರು ವೀರಶೈವ ಪಂಚಮಶಾಲಿ ಮನೆತನದವರು. ಉತ್ತರ ಕರ್ನಾಟಕದಲ್ಲಿ ಪಂಚಮಶಾಲಿಗಳು ಮುಖ್ಯವಾಗಿ ಬೇಸಾಯ ಮಾಡಿ ಕೊಂಡಿದ್ದಾರೆ. ಇವರಿಗೆ 'ಲಿಂಗಾಯತ ಒಕ್ಕಲಿಗರು' ಎಂತಲೂ ಕರೆಯು ತ್ತಾರೆ.

ಗಂಗಾಧರ ಅವರ ತಂದೆ ಚೆನ್ನಬಸಪ್ಪ, ತಾಯಿ ಪಾರ್ವತಿ. ತಂದೆಗೆ ಇಬ್ಬರು ಹೆಂಡಂದಿರು. ಹಿರಿಯ ಪತ್ನಿ ಮುರಿಗೆಮ್ಮ. ಇವಳಿಗೆ ಸೋಮಪ್ಪ, ಸಿದ್ಧಲಿಂಗಪ್ಪ ಹಾಗೂ ಚೆನ್ನಮ್ಮ ಎಂಬ ಮೂವರು ಮಕ್ಕಳು. ಕಿರಿಯ ಹೆಂಡತಿ ಪಾರ್ವತಿಗೆ ಗಂಗಪ್ಪ, ವೀರಪ್ಪ ಮತ್ತು ಶಿವಮ್ಮ ಎಂಬ ಮೂವರು

ಮಕ್ಕಳು. ಚೆನ್ನಬಸಪ್ಪ ತಮ್ಮ ಕುಲಕಸುಬಾದ ಬೇಸಾಯವನ್ನೇ ಮಾಡಿ ಕೊಂಡು ಜೀವಿಸುತ್ತಿದ್ದರು.

ಚೆನ್ನಬಸಪ್ಪ ಹಾಗೂ ಅವರ ಸಹೋದರರಿಗೆ ಮನೆತನದ ಆಸ್ತಿಯ ಬಗೆಗೆ ಒಂದಿಷ್ಟು ಭಿನ್ನಾಭಿಪ್ರಾಯ ಉಂಟಾಯಿತು. ಇದನ್ನು ಬಗೆಹರಿಸಲು ಅಥಣಿಯಿಂದ ಹಿರಿಯಮಠದ ಮಡಿವಾಳ ಸ್ವಾಮಿಗಳು ಬೈಲುಹೊಂಗಲಕ್ಕೆ ಬಂದರು. ಈ ಮಡಿವಾಳ ಸ್ವಾಮಿಗಳು ತುರಮರಿ ಮನೆತನದ ಕುಲಗುರು ಗಳು.

ತುರಮರಿ ಬಂಧುಗಳಲ್ಲಿ ಉಂಟಾದ ಜಗಳ ತೀರಿಸಲು ಬಂದ ಸ್ವಾಮಿ ಗಳವರು ಬಹಳ ದಿನಗಳವರೆಗೆ ಅವರಲ್ಲಿಯೇ ಬೀಡುಬಿಟ್ಟರು. ಕೊನೆಗಾಲ ದವರೆಗೆ ಅವರು ಬೈಲುಹೊಂಗಲದಲ್ಲಿಯೇ ಇದ್ದರು. ಮಡಿವಾಳ ಸ್ವಾಮಿ ಗಳು ತುರಮರಿ ಅವರಲ್ಲಿ ಹಾಗೇ ಕೂಡಲಿಲ್ಲ. ಚೆನ್ನಬಸಪ್ಪನ ಮಕ್ಕಳಿಗೆ ವಿದ್ಯಾಭ್ಯಾಸ ಹೇಳತೊಡಗಿದರು. ದಿನಾಲು ಮನೆಯಲ್ಲಿ ಚಿಕ್ಕಮಕ್ಕಳಿಗೆ ಓದುಬರಹ ಕಲಿಸಲು ಆರಂಭಿಸಿದರು.

## ಅಧ್ಯಯನ : ದೀಕ್ಷೆ

ಆಗಿನ ಕಾಲದ ಮರಾಠಿ ಪ್ರಭಾವದಿಂದ ಅಯ್ಯನವರ ಮಠಗಳಲ್ಲಿ ಮರಾಠಿ ಭಾಷೆ ಹಾಗೂ ಮೋಡಿ ಅಕ್ಷರಗಳನ್ನು ಹೇಳಿಕೊಡಲಾಗುತ್ತಿತ್ತು. ಕನ್ನಡಕ್ಕೆ ಅಷ್ಟು ಪ್ರಾಧಾನ್ಯತೆ ಇರಲಿಲ್ಲ. ವ್ಯಾವಹಾರಿಕ ಭಾಷೆಯೆಂದು ಪಾಲಕರು ಕೂಡ ಮರಾಠಿಯನ್ನೇ ಕಲಿಯಲು ತಮ್ಮ ಮಕ್ಕಳಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಬೈಲುಹೊಂಗಲದಲ್ಲಿಯೂ ಇದೇ ಸ್ಥಿತಿಯಿತ್ತು. ಮೋಡಿ ಲಿಪಿಯಲ್ಲಿ ಮರಾಠಿಯನ್ನು ಬರೆಯಲಾಗುತ್ತಿತ್ತು.

ಬಾಲಕ ಗಂಗಪ್ಪ ತುಂಬ ಜಾಣ. ಆತನ ಬುದ್ಧಿವಂತಿಕೆಯನ್ನು ಕಂಡು ಮಡಿವಾಳ ಸ್ವಾಮಿಗಳು ಆತನಿಗೆ ಕನ್ನಡ, ಗಣಿತ, ಸಂಸ್ಕೃತಗಳನ್ನು ಹೇಳಿ ಕೊಟ್ಟರು. ಪರಿಸ್ಥಿತಿಯಿಂದ ಗಂಗಪ್ಪನು ಪ್ರಾರಂಭದಲ್ಲಿ ಮರಾಠಿಯನ್ನೇ ಕಲಿತಿದ್ದನು. ಅನಂತರ ಮಡಿವಾಳ ಸ್ವಾಮಿಗಳು ಆತನಿಗೆ ಕನ್ನಡದ ದೀಕ್ಷೆ ಕೊಟ್ಟರು. ಮಾತೃಭಾಷೆಯನ್ನು ಕಲಿಯುವುದು ಆತನಿಗೆ ತೊಂದರೆಯೇನಾಗ ಲಿಲ್ಲ.



**ಪಾಲಕರು ಕೂಡ ಮರಾಠಿಯನ್ನು ಕಲಿಯಲು ಪ್ರೋತ್ಸಾಹ ಕೊಡುತ್ತಿದ್ದರು**

ಗಂಗಪ್ಪ ಬಹಳ ಚುರುಕಾದ ಬಾಲಕ. ಗುರುಗಳು ಹೇಳಿದ್ದನ್ನು ಕೂಡಲೇ ಗ್ರಹಿಸುತ್ತಿದ್ದನು. ಸಂಸ್ಕೃತ, ಹಳಗನ್ನಡವನ್ನು ಬೇಗ ಕಲಿತುಕೊಂಡನು. ಇದರಿಂದ ಸಂತೋಷಗೊಂಡ ಮಡಿವಾಳ ಸ್ವಾಮಿಗಳು ಬಾಲಕ ಗಂಗಾಧರನಿಗೆ ಎಲ್ಲವನ್ನೂ ಹೇಳಿಕೊಡುತ್ತಲಿದ್ದರು.

ಬಾಲಕ ಗಂಗಾಧರನ ಬಗೆಗೆ ಗುರುಗಳಲ್ಲಿ ಒಂದು ಬಗೆಯ ವಾತ್ಸಲ್ಯ ಬೆಳೆಯುತೊಡಗಿತ್ತು. ಗುರು ಶಿಷ್ಯರ ಬಾಂಧವ್ಯ ಇನ್ನೂ ಹತ್ತಿರವಾಗಿ ಬೆಸೆದಿತ್ತು. ಗಂಗಾಧರನ ಬಗೆಗೆ ಮಡಿವಾಳಸ್ವಾಮಿಗಳಲ್ಲಿ ಆಸ್ಥೆ ಬಲವಾಯಿತು. ಬುದ್ಧಿವಂತ ಬಾಲಕನಾದ ಗಂಗಾಧರನನ್ನೇ ತಮ್ಮ ಅಥಣಿಯ ಹಿರಿಯ ಮಠಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂಬ ಬಯಕೆ ಹುಟ್ಟಿಕೊಂಡಿತು. ಈ ತೀಕ್ಷ್ಣ ಬುದ್ಧಿಯ ಬಾಲಕನೇ ಅದಕ್ಕೆ ತಕ್ಕವನೆಂದು ಅವರ ಭಾವನೆ.

ಮಡಿವಾಳೇಶ್ವರ ಸ್ವಾಮಿಗಳು ತಮ್ಮ ಆಶಯವನ್ನು ಗಂಗಾಧರನ ಜನ್ಮದಾತ, ಚೆನ್ನಬಸಪ್ಪನವರ ಮುಂದೆ ಇಟ್ಟರು.

ಗುರುಗಳ ಬಯಕೆ ಚೆನ್ನಬಸಪ್ಪ ಹಾಗೂ ಪಾರ್ವತಮ್ಮ ಇಬ್ಬರಿಗೂ ಸಂತೋಷವನ್ನುಂಟುಮಾಡಿತು. ಆ ದಂಪತಿಗಳು ತಮ್ಮ ಪ್ರೀತಿಯ ಪುತ್ರನನ್ನು ಗುರುಗಳ ಉಡಿಯಲ್ಲಿ ಹಾಕಲು ಸಿದ್ಧರಾದರು. ಗುರುಗಳ ಮಾತು ಮೀರದಷ್ಟು ಶ್ರದ್ಧೆ ಅವರಲ್ಲಿ.

ವೀರಶೈವರಲ್ಲಿಯ ಪೂರ್ವದ ಸಂಪ್ರದಾಯದಂತೆ ಒಂದು ಶುಭ ಮುಹೂರ್ತ ನೋಡಿ, ಭಕ್ತಮಾಹೇಶ್ವರರ ಸಮ್ಮುಖದಲ್ಲಿ ಶಾಸ್ತ್ರದ ರೀತಿಯಿಂದ ಮಗು ಗಂಗಾಧರನಿಗೆ ಜಂಗಮ ದೀಕ್ಷೆಯನ್ನು ಕೊಟ್ಟರು. ಈಗ ಬಾಲಕ ಗಂಗಾಧರನು ಅಥಣಿಯ ಹಿರಿಯ ಮಠದ ಮಡಿವಾಳೇಶ್ವರರ ವರಪುತ್ರನಾದನು. ಆತ ಮೊಲು ಗಂಗಪ್ಪನಾಗಿದ್ದು, ಗುರುಗಳ ಬಾಯಲ್ಲಿ ಗಂಗಾಧರನಾಗಿ, ಈಗ ದೀಕ್ಷೆ ಪಡೆದು ಗಂಗಾಧರಯ್ಯನಾದ. ತಂದೆ ಮಡಿವಾಳೇಶ್ವರ, ದೀಕ್ಷಾ ಸಮಾರಂಭವು ಜರುಗಿದ ಕೆಲವು ದಿನಗಳಲ್ಲಿ ಮಡಿವಾಳ ಸ್ವಾಮಿಗಳು ತೀರಿಕೊಂಡರು.

ಗಂಗಾಧರಯ್ಯ ಯುವಾವಸ್ಥೆಗೆ ಬಂದ ಬಳಿಕ ಅಥಣಿ ಮಠಕ್ಕೆ ಅಧಿಕಾರಿಯಾಗಿ ಹೋಗಲಿಲ್ಲ. ಅದೆಲ್ಲ ಆತನಿಗೆ ಅಪರಿಚಿತ ಪ್ರದೇಶವಾಗಿತ್ತು. ಬೈಲುಹೋಂಗಲದ ಮನೆಯಲ್ಲಿಯೇ ಗಂಗಾಧರಯ್ಯ ಉಳಿದುಕೊಂಡರು. ಜನ್ಮದಾತ ತಂದೆತಾಯಿಗಳ ಹಾಗೂ ಸಹೋದರ, ಸಹೋದರಿಯ:ರ ವಾತ್ಸಲ್ಯ, ಗಂಗಾಧರಯ್ಯನವರ ಮೇಲೆ ಮೊದಲಿನಂತೆಯೇ ಇದ್ದಿತು. ಅದೇನು ಕಡಿಮೆಯಾಗಿರಲಿಲ್ಲ.

ಚೆನ್ನಬಸಪ್ಪ ತಮ್ಮ ಉಳಿದ ಗಂಡುಮಕ್ಕಳಿಗೆ ಪಾಲುಕೊಟ್ಟಂತೆ, ಗಂಗಾಧರಯ್ಯನವರಿಗೂ ಹೊಲ ಮನೆಗಳಲ್ಲಿ ಪಾಲು ಕೊಟ್ಟರು. ಮಗ ಗಂಗಾಧರನು ಮಡಿವಾಳೇಶ್ವರ ಗುರುಗಳ ಉಡಿಯಲ್ಲಿ ಬಿದ್ದರೂ ಸ್ವಂತ

ಮಗನಾಗಿಯೇ ಚೆನ್ನಬಸಪ್ಪನವರಿಗೆ ಕಂಡಿರಬೇಕು. ಅದಕ್ಕಾಗಿಯೇ ತಮ್ಮ ಆಸ್ತಿ ಹಂಚಿದರು.

ಮುಂದೆ ಗಂಗಾಧರಯ್ಯ ತಮ್ಮ ಬರವಣಿಗೆಯಲ್ಲಿ 'ಗಂಗಾಧರ' ಎಂದು ತಮ್ಮ ಹೆಸರನ್ನೂ, 'ಮಡಿವಾಳೇಶ್ವರ' ಎಂದು ದೀಕ್ಷಾ ತಂದೆಯ ಹೆಸರನ್ನೂ ಬರೆದುಕೊಂಡರು. ಕೊನೆಗೆ ಮನೆತನದ ಹೆಸರನ್ನು 'ಹಿರೇಮಠ' ಎಂದು ಬರೆಯದೆ ಮೂಲ ಮನೆತನದ ಹೆಸರಾದ 'ತುರಮರಿ' ಎಂದೇ ಬರೆದುಕೊಂಡರು. ಮೊದಲಿನ ಮನೆಯ ಬಗೆಗೆ ತುಂಬ ಅಭಿಮಾನ. ಅದಕ್ಕೆಂದೇ ಅವರು ಗಂಗಾಧರ ಮಡಿವಾಳೇಶ್ವರ ತುರಮರಿ ಎಂದಾದರು. ಪಡೆದ ತಂದೆಯ ಬಗೆಗೆ ಅಭಿಮಾನ, ಹುಟ್ಟಿದ ಮನೆಯ ಬಗೆಗೆ ಗೌರವ.

## ಅಧ್ಯಾಪನ ವೃತ್ತಿ

ಗಂಗಾಧರಯ್ಯ ಕನ್ನಡ, ಮರಾಠಿ, ಸಂಸ್ಕೃತ ಭಾಷೆಗಳಲ್ಲಿನ ಕಾವ್ಯಗಳನ್ನು ಓದಿ ಅರ್ಥ ಹೇಳುವುದರಲ್ಲಿ ಸಮರ್ಥರಾಗಿದ್ದರು. ಇದರಲ್ಲಿ ತುಂಬಾ ಬಲ್ಲಿದರು. ಪುರಾಣ ಪ್ರವಚನ ಮಾಡುವುದರಲ್ಲಿ ಅಗ್ಗಳಿಕೆ ಗಳಿಸಿದರು. ಹಳಗನ್ನಡ ಕಾವ್ಯಗಳನ್ನು ಬಾಳೆಯ ಹಣ್ಣು ಸುಲಿದಂತೆ ಸರಳ ರೀತಿಯಲ್ಲಿ, ರಸಭರಿತವಾಗಿ ಜನಸಾಮಾನ್ಯರಿಗೆ ಹೇಳುತ್ತಲಿದ್ದರು.

ಅದರಲ್ಲಿಯೂ 'ಬಸವಪುರಾಣ' ಹಾಗೂ 'ಪ್ರಭುಲಿಂಗಲೀಲೆ' ಕಾವ್ಯಗಳನ್ನೂ ಗಂಗಾಧರಯ್ಯನವರು ಹೇಳುವ ರೀತಿ ಅಮೋಘವಾಗಿತ್ತು. ಆಗಿನ ಕಾಲದಲ್ಲಿ ಈ ರೀತಿಯಲ್ಲಿ ಕಾವ್ಯ ತಿಳಿದು, ವಿಶ್ಲೇಷಣೆ ಮಾಡಿ ಅಚ್ಚುಕಟ್ಟಾಗಿ ಹೇಳುವವರು ಯಾರೂ ಇರಲಿಲ್ಲವಂತೆ.

ಗಂಗಾಧರಯ್ಯನವರು ಆಗ ಊರಲ್ಲಿ ಸೋಮಾರಿಯಾಗಿ ಕೂಡದೆ, ಮನೆಯಲ್ಲಿಯೇ ಒಂದು ಶಾಲೆಯನ್ನು ಆರಂಭಿಸಿದರು. ಇಂಥ ಖಾಸಗಿ ಶಾಲೆಗಳನ್ನು ಆ ಸಮಯ 'ಗಾವಠೀ' ಶಾಲೆಗಳೆಂದು ಕರೆಯುತ್ತಿದ್ದರು. ಗಂಗಾಧರಯ್ಯನವರ ಶಾಲೆಗೆ ಚಿಕ್ಕಮಕ್ಕಳಲ್ಲದೆ, ವಯಸ್ಕರೂ ಬರತೊಡಗಿದರು. ಅವರೇ ಹೆಚ್ಚಿನ ಸಂಖ್ಯೆಯಲ್ಲಿ ಸೇರತೊಡಗಿದರು.

ಗಂಗಾಧರಯ್ಯನವರ 'ಸಾಲೀಮಠ'ವು ಹಿರಿಯರಿಗೆ ವಿಶ್ರಾಂತಿಯ

ತಾಣವಾದಂತೆ, ಹರಟೆಯ ಕೇಂದ್ರವೂ ಆಗಿ ಪರಿವರ್ತಿಸಿತು. ಅಧ್ಯಯನಕ್ಕಿಂತ ಅಧಿಕಪ್ರಸಂಗದ ಸ್ಥಾನವಾದ ತಮ್ಮ ಶಾಲೆಯ ಸ್ಥಿತಿ ಕಂಡು ಗಂಗಾಧರಯ್ಯನವರಿಗೆ ಒಳಗೊಳಗೇ ಕೊರಗು.

ಸೌಮ್ಯ ಸ್ವಭಾವದ ಅವರು, ಯಾರಿಗೂ ಮನನೋಯುವಂತೆ ಎದುರು ಮಾತನಾಡಲಾರದವರು. ಆದರೂ ಹಿರಿಯರಿಗೆ ಪುರಾಣ ಹೇಳುತ್ತಿದ್ದಂತೆ, ಮಕ್ಕಳಿಗೆ ಬೇರೆಯಾಗಿ ಓದು ಬರಹ, ಕಾವ್ಯ ಕಲಿಸತೊಡಗಿದರು. ಕನ್ನಡ ಭಾಷೆಗೆ ಪ್ರಾಧಾನ್ಯತೆ ಕೊಟ್ಟರು. ಗಂಗಾಧರಯ್ಯನವರು ಕಲಿಸುವ ಶಿಕ್ಷಣ ಕೆಲವರ ಮನಸ್ಸಿಗೆ ಬಂದಿರಲಿಲ್ಲ. ಗಂಗಾಧರಯ್ಯ ಮಕ್ಕಳ ಮನಸ್ಸು ಅರಿತು ಓದು ಬರಹ ಕಲಿಸುತ್ತಿದ್ದರು. ಅನಂತರ ಭಾಷೆಯ ಬಗೆಗೆ ಹೆಚ್ಚಿನ ಜ್ಞಾನ ಮಾಡಿಕೊಡುತ್ತಿದ್ದರು. ಹೀಗಾಗಿ ಮೊದಲು ಗದ್ಯಪದ್ಯ, ಅನಂತರ ಇನ್ನುಳಿದ ವಿಷಯಗಳಿಗೆ ಒತ್ತುಕೊಡುತ್ತಲಿದ್ದರು.

ಆಗಿನ ಬೇಡಿಕೆಯಂತೆ ಪಾಲಕರು ತಮ್ಮ ಮಕ್ಕಳಿಗೆ ಮರಾಠಿಯಲ್ಲಿ ಲೆಕ್ಕ, ಬಾಯಿ ಲೆಕ್ಕ, ಜಮಾ ಖರ್ಚು ಹೇಳಿಕೊಡಲು ಒತ್ತಾಯಿಸುತ್ತಿದ್ದರು. ಅಂದರೆ ಈ ರೀತಿ ಲೆಕ್ಕಪತ್ರಗಳಲ್ಲಿ ಮರಾಠಿಯಲ್ಲಿ ಪರಿಣತರಾದರೆ ಸರಕಾರಿ ನೌಕರಿ ದೊರೆಯುತ್ತಿದ್ದವು. ಆದರೆ ಗಂಗಾಧರಯ್ಯನವರಿಗೆ ಕನ್ನಡವನ್ನಲ್ಲದೆ ಮರಾಠಿ ಕಲಿಸುವುದರಲ್ಲಿ ಮನಸ್ಸಿರಲಿಲ್ಲ. ಕನ್ನಡ ಮಕ್ಕಳು ಕನ್ನಡವನ್ನೇ ಕಲಿಯಬೇಕೆಂದು ಅವರ ಒತ್ತಾಸೆ. ಇದೇ ಕಾರಣಕ್ಕಾಗಿಯೇ ಇರಬೇಕು – ಗಂಗಾಧರಯ್ಯನವರ 'ಸಾಲೀಮಠ'ದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಇಳಿಮುಖವಾಯಿತು.

ಮುಂದೆ ಗಂಗಾಧರಯ್ಯನವರು ಬೈಲುಹೊಂಗಲವನ್ನು ಬಿಡಬೇಕಾಯಿತು. ಅಲ್ಲಿಂದ ಅವರು ಧಾರವಾಡ ಜಿಲ್ಲೆಯ ಬಂಕಾಪುರಕ್ಕೆ ಹೋದರು. ಅಲ್ಲಿ ಅವರು 1848ರ ಜೂನ್ ತಿಂಗಳ 9ನೆಯ ತಾರೀಖಿನ ದಿನ ಒಂದು ಕನ್ನಡ ಶಾಲೆಯನ್ನು ಪ್ರಾರಂಭಿಸಿದರು. ಏಳೆಂಟು ವರ್ಷಗಳವರೆಗೆ ಗಂಗಾಧರಯ್ಯನವರು ಇಲ್ಲಿ ಪರಿಶ್ರಮದಿಂದ ಸೇವೆ ಸಲ್ಲಿಸಿದ್ದು, ಈ ಶಾಲೆಯನ್ನು ಉನ್ನತಮಟ್ಟಕ್ಕೆ ತಂದರು. ಭಾಷಾಪ್ರೇಮದಿಂದ, ಮಕ್ಕಳ ಮೇಲಿನ ಮಮತೆಯಿಂದ, ತಮ್ಮ ಶಿಕ್ಷಣ ಕ್ರಮದಿಂದ ಜನತೆಯಿಂದ ಆದರ್ಶ ಶಿಕ್ಷಕರಾಗಿ ಹೊಗಳಿಸಿಕೊಂಡರು.

ಧಾರವಾಡ ಜಿಲ್ಲೆಯ ದಕ್ಷಿಣದಲ್ಲಿರುವ ಬಂಕಾಪುರದಲ್ಲಿ ಅಂದು ಮರಾಠಿಯ ಹಾವಳಿ ಅಷ್ಟಾಗಿ ಇರಲಿಲ್ಲ. ಗಂಗಾಧರಯ್ಯನವರ ಕೆಲಸ

ಸುಗಮವಾಗಿ ಸಾಗಿತ್ತು. ದಕ್ಷಿಣ ವಿಭಾಗದ ಶಿಕ್ಷಣಾಧಿಕಾರಿಗಳ ಗಮನ ಇಂಥ ಆದರ್ಶ ಶಿಕ್ಷಕನ ಮೇಲಿತ್ತು.

ಕನ್ನಡದ ಬಗೆಗೆ ಮುಂಬಯಿ ಸರಕಾರದ ಗಮನವನ್ನು ಸೆಳೆದವರು ಎಲಿಯಟ್ ಹಾಗೂ ರಸೆಲ್ ಅವರು. 19ನೆಯ ಶತಮಾನದ ಮಧ್ಯಭಾಗ ದಲ್ಲಿ ಇವರು ಕನ್ನಡದ ಬಗೆಗೆ ಕಾಳಜಿ ಮಾಡಿದವರು. ಆ ಸಮಯದಲ್ಲಿ ಉತ್ತರ ಕರ್ನಾಟಕದ ಪ್ರಮುಖ ಗ್ರಾಮಪಟ್ಟಣಗಳಲ್ಲಿ ಕನ್ನಡ ಶಾಲೆಗಳು ಹುಟ್ಟಿಕೊಂಡವು. ಅದಕ್ಕಾಗಿ ಕನ್ನಡ ಕಲಿಸಬಲ್ಲ ಯೋಗ್ಯ ಶಿಕ್ಷಕರು ಬೇಕಾ ಗಿದ್ದರು. 1856ರ ಸುಮಾರಿಗೆ ಮುಂಬಯಿ ಶಿಕ್ಷಣ ಇಲಾಖೆಯವರು ಕನ್ನಡ ವಿದ್ವಾಂಸರನ್ನು ಶೋಧಿಸತೊಡಗಿದ್ದರು. ಹಲವರನ್ನು 'ಅಖವಾನಜಿ' ಅಂದರೆ ಮುಖ್ಯೋಪಾಧ್ಯಾಯರು ಮತ್ತು 'ಪಂತೋಜಿ' ಅಂದರೆ ಸಹಾಯಕ ಶಿಕ್ಷಕರೆಂದು ನಿಯಮಿಸಿಕೊಂಡರು. ಅವರಿಗೆ ಸಂಬಳ 25 ಮತ್ತು 10 ರೂಪಾಯಿಗಳು.

## ಶ್ರೇಷ್ಠದರ್ಜೆಯ ಶಿಕ್ಷಕ

ಈಗ ಬಿಜಾಪುರ ಜಿಲ್ಲೆಗೆ ಸೇರಿದ ಹುನಗುಂದ ತಾಲ್ಲೂಕು ಕೇಂದ್ರವು ಆ ಕಾಲಕ್ಕೆ ಬೆಳಗಾವಿ ಜಿಲ್ಲೆಯ ಒಂದು ದೊಡ್ಡ ಗ್ರಾಮವಾಗಿತ್ತು. ಆ ಸಮ ಯದಲ್ಲಿ ಗಂಗಾಧರಯ್ಯನವರಿಗೆ 'ಅಖವಾನಜಿ' ನೌಕರಿ ದೊರೆತಿದ್ದು, ಅವರು ಬಂಕಾಪುರವನ್ನು ಬಿಟ್ಟು ಹುನಗುಂದ ಶಾಲೆಗೆ ಹೋದರು. ಆಗ ಗಂಗಾಧ ರಯ್ಯನವರಿಗೆ ವಯಸ್ಸು ಸುಮಾರು 29 ವರ್ಷ.

ಗಂಗಾಧರಯ್ಯನವರಿಗೆ ವಿವಾಹವಾಗಿತ್ತು. ಇಬ್ಬರು ಹೆಂಡಂದಿರು. ಬೈಲುಹೊಂಗಲದ ಮುನವಳ್ಳಿ ಮಠ ಮನೆತನದ ನಾಗಮ್ಮ ಹಾಗೂ ಮುರ ಗೋಡ ಹಿರೇಮಠ ಮನೆತನದ ಚೆನ್ನಬಸಮ್ಮ.

ಕಲಿಸುವುದರಲ್ಲಿ ಅಂಥ ಯಾವ ಪ್ರಶಿಕ್ಷಣವನ್ನು ಪಡೆಯದಿದ್ದರೂ ಗಂಗಾಧರಯ್ಯ ಪ್ರತಿಭಾವಂತ ಶಿಕ್ಷಕರಾಗಿದ್ದರು. ಪ್ರಥಮ ದರ್ಜೆಯ ಉಪಾಧ್ಯಾಯರು. ಹಳಗನ್ನಡ ಕಾವ್ಯ, ಸಂಸ್ಕೃತಗಳನ್ನು ಮನಮುಟ್ಟುವಂತೆ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಅದರಂತೆ ಗಣಿತ, ವ್ಯಾಕರಣ,

ಛಂದಸ್ಸು, ಇವುಗಳನ್ನು ಕೂಡ ಪಾಂಡಿತ್ಯಪೂರ್ಣವಾಗಿ ಹೇಳಿಕೊಡುತ್ತ ಲಿದ್ದರು. ಗಂಗಾಧರಯ್ಯನವರಿಗೆ ಸರಿಸಮಾನರಾದ ಬೇರೆ ಯಾವ ಶಿಕ್ಷಕರು ಆ ಭಾಗದಲ್ಲಿ ಇರಲಿಲ್ಲವಂತೆ.

ಗಂಗಾಧರಯ್ಯನವರ ಪಾಂಡಿತ್ಯ, ಪ್ರತಿಭೆ, ಅಧ್ಯಾಪನ ಕೌಶಲ್ಯ, ವಿವರಣಾ ಚಾತುರ್ಯ, ಕಾರ್ಯಕ್ಷಮತೆ, ಅಚ್ಚುಕಟ್ಟುತನ, ಶಿಸ್ತು, ಮಧುರ ವಾದರೂ ಗಂಭೀರ ಸ್ವಭಾವ, ಕನ್ನಡದ ಅಭಿಮಾನ ಇವು ಹೇಳಿಕೊಳ್ಳಬೇಕಾ ದಂಥವುಗಳು. ಇವೇ ಕಾರಣಗಳಿಂದ ಹುನಗುಂದದ ಸರಕಾರಿ ಶಾಲೆ ತುಂಬಾ ಬೆಳೆಯಿತು. ಇದು ತಮ್ಮ ಪುಣ್ಯವೆಂದು ವಿದ್ಯಾರ್ಥಿ ಬಳಗ ಹೇಳಿಕೊಂಡರೆ, ನಾಡಿನ ಭಾಗ್ಯ ಎಂದು ಅಧಿಕಾರಿಗಳು ಹೊಗಳಿದರು. ಗಂಗಾಧರಯ್ಯನವರ ವಿದ್ವತ್ತು ಕಂಡು ಕರುಬಿದವರೂ ಇದ್ದರು. ಆ ಮಾತು ಬೇರೆ.

ಯಾವ ಹೊಗಳಿಕೆ ತೆಗಳಿಕೆಗಳಿಗೆ ಗಮನವೀಯದ ಗಂಗಾಧರಯ್ಯ ನಿತ್ಯ ತಮ್ಮ ಪವಿತ್ರ ಕಾರ್ಯದಲ್ಲಿ ನಿರತರಾಗುತ್ತಿದ್ದರು. ತರುಣ ವಯಸ್ಸಿನ ಉತ್ಸಾಹಿ ಗಂಗಾಧರಯ್ಯ ಮುಖ್ಯೋಪಾಧ್ಯಾಯರಾಗಿ ಒಂದು ವರ್ಷ ಸೇವೆ ಸಲ್ಲಿಸಿದ್ದರು. ಆ ಕಾಲಕ್ಕೆ ಅಖಿವಾನಜಿ ಹಾಗೂ ಪಂತೋಜಿಯವರ ಸಂಬಳ 25 ರಿಂದ 12 ಹಾಗೂ 10 ರಿಂದ 5ಕ್ಕೆ ಇಳಿದಿತ್ತು. ಶಿಕ್ಷಕರಿಗೆ ಅಷ್ಟು ಸಂಬಳ ಕೊಡುವುದು ಹೆಚ್ಚೆಂದು ಸರಕಾರಕ್ಕೆ ತೋರಿತ್ತು. ಪ್ರತಿಭಟಿಸುವ ವರು ಯಾರಿರಲಿಲ್ಲ.

ಸರಕಾರದ ಈ ನೀತಿಯಿಂದ ಗಂಗಾಧರಯ್ಯನವರಿಗೆ ಅಸಂತೋಷವಾ ಯಿತು. ಈ ಮುಖ್ಯೋಪಾಧ್ಯಾಯ ನೌಕರಿಯನ್ನು ಬಿಡಬೇಕೆಂದು ನಿರ್ಧರಿ ಸಿದರು. ಬೇರೆಡೆ ಹೊಸ ನೌಕರಿಗಾಗಿ ಪ್ರಯತ್ನಿಸಿದರು. ಹೈದ್ರಾಬಾದ ಸಂಸ್ಥಾನದ ಕರ್ನಾಟಕ ಭಾಗದಲ್ಲಿ ಮೋಜಣಿದಾರನಾಗಿ ಬರಲು ಇಚ್ಛೆ ವ್ಯಕ್ತ ಪಡಿಸಿ ಗೆಳೆಯರಿಗೆ ಪತ್ರ ಬರೆದರು. ಆಗ ಬೇರೆ ನೌಕರಿಗಳು ದೊರೆಯಲಿಲ್ಲ. ಬೇರೆ ಕಡೆಗೆ ಸಾಧ್ಯವಾಗದೆ ಇದ್ದ ಸೇವೆಯಲ್ಲಿಯೇ ಮುಂದುವರಿಯಬೇಕಾ ಯಿತು.



ಮುಖ್ಯೋಪಾಧ್ಯಾಯ ನೌಕರಿಯನ್ನು ಬಿಡಬೇಕೆಂದು ನಿರ್ಧರಿಸಿದರು

## ನೋವಿನಲ್ಲಿಯೂ ನಲಿವು

ಹುಟ್ಟಿದ ಮೊದಲ ಗಂಡುಮಗು ಮೈಲಿಬೇನೆಯಿಂದ ತೀರಿಕೊಂಡಿತು. ಇದರಿಂದ ಗಂಗಾಧರಯ್ಯನವರ ಮನಸ್ಸಿಗೆ ತುಂಬ ನೋವಾಯಿತು. ಹುನಗುಂದದ ಮುಖ್ಯಾಧ್ಯಾಪಕ ವೃತ್ತಿಯನ್ನು ಬಿಟ್ಟು ಬೈಲುಹೊಂಗಲಕ್ಕೆ ಬರಬೇಕೆಂದು ಮನೆಯವರು ಒತ್ತಾಯಪಡಿಸತೊಡಗಿದರು. ಹೀಗಾಗಿ ಕಡಿಮೆ ಸಂಬಳದ ನೌಕರಿಯನ್ನು ಬಿಡಬೇಕೆಂದು ಗಂಗಾಧರಯ್ಯ ನಿರ್ಧರಿಸಿದರು. ಅದರಂತೆ ಸರಕಾರಕ್ಕೆ ತಮ್ಮ ರಾಜೀನಾಮೆಯನ್ನು ಬರೆದು ಸಲ್ಲಿಸಿದರು. ಅದು ಸ್ವೀಕೃತವಾಗಲಿಲ್ಲ. ಗಂಗಾಧರಯ್ಯನವರಂಥ ಶ್ರೇಷ್ಠ ದರ್ಜೆಯ ಶಿಕ್ಷಕರನ್ನು ಕಳೆದುಕೊಳ್ಳಲು ವಿದ್ಯಾಖಾತೆ ಸಿದ್ಧವಿರಲಿಲ್ಲ. ಹಾಗಾಗಿ ಇವರು ಹುನಗುಂದದಲ್ಲಿಯೇ ಇರಬೇಕಾಯಿತು. ಅನಿವಾರ್ಯವಾಗಿ ಕಡಿಮೆ ಸಂಬಳದಲ್ಲಿಯೇ ಮನೆಯ ವೆಚ್ಚವನ್ನು ಸಾಗಿಸಿದರು.

ಸಾಂಸಾರಿಕ ತೊಂದರೆಗಳು ಅನೇಕ ಬಗೆಯಾಗಿ ಇದ್ದರೂ, ಗಂಗಾಧರಯ್ಯ ಅವುಗಳನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ನೋವಿನಲ್ಲಿಯೂ ನಲಿವನ್ನು ಕಾಣುವ ಮನೋಭಾವ ಇವರದು. ಧೈರ್ಯದಿಂದ ಎಲ್ಲ ಪ್ರಸಂಗಗಳನ್ನು ಎದುರಿಸುತ್ತಲಿದ್ದರು.

ಪುರಾಣ ಪ್ರವಚನ ಹಾಗೂ ಕಾವ್ಯವಾಚನಗಳಲ್ಲಿ ಪಾಂಡಿತ್ಯ ಪಡೆದ ಗಂಗಾಧರಯ್ಯನವರು ಹುನಗುಂದದಲ್ಲಿ ಹಾಗೇ ಕೂಡುತ್ತಿರಲಿಲ್ಲ. ಮನೆಯಲ್ಲಿ ಅಧ್ಯಯನವಂತೂ ನಡೆದೇ ಇರುತ್ತಿತ್ತು. ತಮ್ಮ ಶಾಲೆಯ ಅವಧಿಯ ಬೋಧನೆಯನ್ನು ಪೂರೈಸಿಕೊಂಡು ಸಾಯಂಕಾಲ ಅಲ್ಲಿನ 'ದರಗಾಮಠ' ದಲ್ಲಿ ಹಳಗನ್ನಡ ಕಾವ್ಯಗಳ ಪ್ರವಚನ ನಡೆಸುತ್ತಿದ್ದರು. ಬಸವ ಪುರಾಣ, ಪ್ರಭುಲಿಂಗಲೀಲೆ, ರಾಜಶೇಖರ ವಿಳಾಸಗಳನ್ನು ಓದಿ ನಾಗರಿಕರಿಗೆ ಹೇಳುತ್ತಲಿದ್ದರು. ಗ್ರಾಮದ ಬಹುಸಂಖ್ಯೆಯಲ್ಲಿ ಜನರು ಗಂಗಾಧರಯ್ಯನವರ ಅಮೃತವಾಣಿಯನ್ನು ಕೇಳಲು ಸೇರುತ್ತಿದ್ದರು.

ಗಂಗಾಧರಯ್ಯ ಹುನಗುಂದದಲ್ಲಿ ಸೇವೆ ಸಲ್ಲಿಸುತ್ತ 5 ವರ್ಷ ಕಳೆದರು. ಅಧ್ಯಾಪನ ವೃತ್ತಿಯ ಜತೆ ಜನ ಜಾಗೃತಿ, ಸಮಾಜ ಸುಧಾರಣೆಯಂಥ ಕಾರ್ಯಗಳನ್ನೂ ಕೈಗೊಂಡಿದ್ದರು.

## ವಿಸ್ತಾರವಾದ ಕ್ಷೇತ್ರ

1861ರಲ್ಲಿ ಚೆನ್ನಬಸಪ್ಪ ಬಸವಲಿಂಗಪ್ಪ ಧಾರವಾಡ ಇವರು ಬೆಳಗಾವಿ ಜಿಲ್ಲೆಯ ಡೆಪ್ಯುಟಿ ಇನ್ಸ್‌ಪೆಕ್ಟರ್ ಸ್ಥಾನಕ್ಕೆ ಬಂದರು. ಮೊದಲು ಚೆನ್ನಬಸಪ್ಪನವರು ಬೆಳಗಾವಿಯ ಟ್ರೇನಿಂಗ್ ಶಾಲೆಯ ಪ್ರಾಚಾರ್ಯರಾಗಿದ್ದರು. ಮುಂದೆ ಕರ್ನಾಟಕದಲ್ಲಿ 'ಡೆಪ್ಯುಟಿ ಚೆನ್ನಬಸಪ್ಪ' ಎಂದು ಪ್ರಖ್ಯಾತರಾದ ಇವರು ಕನ್ನಡದ ಬಗೆಗೆ ತುಂಬ ಅಭಿಮಾನವುಳ್ಳವರು. ಕನ್ನಡ ಭಾಷೆಯ ಬೆಳವಣಿಗೆಗಾಗಿ ಹಗಲು ರಾತ್ರಿ ದುಡಿದ ಮಹಾನುಭಾವರು.

ಡೆಪ್ಯುಟಿ ಚೆನ್ನಬಸಪ್ಪನವರು ಶಿಕ್ಷಣಾಧಿಕಾರಿಗಳಾಗಿ ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ಪರೀಕ್ಷೆಗಾಗಿ ಹುನಗುಂದ ಶಾಲೆಗೆ ಬಂದರು. ಆಗಲೇ ಅವರು ಪ್ರಥಮ ಸಲ ಗಂಗಾಧರಯ್ಯ ತುರಮರಿ ಮಾಸ್ತರರನ್ನು ಕಂಡಿದ್ದು. ಇದಕ್ಕೂ ಮೊದಲು ಗಂಗಾಧರಯ್ಯನವರು ಶ್ರೇಷ್ಠ ದರ್ಜೆಯ ಶಿಕ್ಷಕರೆಂದು ದೂರದಿಂದ ಕೇಳಿ ಬಲ್ಲವರಾಗಿದ್ದರು,

ಗಂಗಾಧರ ಮಡಿವಾಳೇಶ್ವರ ತುರಮರಿ ಅವರ ಬೋಧನಾ ಕ್ರಮ, ಕನ್ನಡ ಭಾಷೆಯ ಮೇಲಿನ ಪ್ರಭುತ್ವ, ಹಳಗನ್ನಡ ಕಾವ್ಯ, ಸಂಸ್ಕೃತ ಭಾಷೆಯ ಪರಿಜ್ಞಾನ ಹಾಗೂ ಒಳ್ಳೆಯ ಗುಣ ಸ್ವಭಾವಗಳನ್ನು ಪ್ರತ್ಯಕ್ಷ ಕಂಡು ಶಿಕ್ಷಣಾಧಿಕಾರಿ ಚೆನ್ನಬಸಪ್ಪ ಮಾರುಹೋದರು.

ಗಂಗಾಧರ ತುರಮರಿ ಅವರಂಥ ವಿದ್ವಾಂಸರು ಉನ್ನತ ಸ್ಥಾನದಲ್ಲಿದ್ದರೆ, ಕನ್ನಡಕ್ಕೆ ಹೆಚ್ಚಿನ ಉಪಕಾರವಾಗುವುದೆಂಬ ದೂರ ದೃಷ್ಟಿಯಿಂದ ಡೆಪ್ಯುಟಿ ಚೆನ್ನಬಸಪ್ಪ ಆಲೋಚಿಸಿದರು. ಅದರಂತೆ ತುರಮರಿ ಅವರು ನಾರ್ಮಲ್ ಸ್ಕೂಲ್, ಅಂದರೆ ಟ್ರೇನಿಂಗ್ ಶಾಲೆಗೆ ಸಮರ್ಥರೆಂದು ತಿಳಿದರು. ಅವರನ್ನು ಹುನಗುಂದ ಪ್ರಾಥಮಿಕ ಶಾಲೆಯಿಂದ ಬೆಳಗಾವಿಯ ನಾರ್ಮಲ್ ಸ್ಕೂಲಿಗೆ ಸಹಾಯಕ ಅಧ್ಯಾಪಕರಾಗಲು ಯೋಗ್ಯರು ಎಂದು ಶಿಕ್ಷಣ ಖಾತೆಗೆ ಶಿಫಾರಸು ಮಾಡಿದರು. ಗಂಗಾಧರ ತುರಮರಿ ಅವರಂಥ ಕನ್ನಡ ಪಂಡಿತರು, ಕನ್ನಡ ಭಾಷಾ ಶಿಕ್ಷಕರಿಗೆ ಹೆಚ್ಚಿನ ಸಾಹಿತ್ಯಕ ಜ್ಞಾನ ಮಾಡಿಕೊಡುವರೆಂಬ ಭರವಸೆ ಚೆನ್ನಬಸಪ್ಪನವರಿಗಿತ್ತು.

ಅದೇ ವರ್ಷ ತುರಮರಿ ಅವರು ಬೆಳಗಾವಿಯ ನಾರ್ಮಲ್ ಸ್ಕೂಲಿಗೆ ಸಹಾಯಕ ಅಧ್ಯಾಪಕರಾಗಿ ಬಂದರು. ಕನ್ನಡ ಭಾಷೆಗೆ ಇದೂ ಕೂಡ ಒಂದು

ಮಹೋಪಕಾರವೆಂದೇ ಹೇಳಬೇಕು. ಗಂಗಾಧರ ತುರಮರಿ ಅವರು ಕನ್ನಡ ಕ್ಕಾಗಿ ದುಡಿಯಬೇಕೆಂದಿರುವ ಕ್ಷೇತ್ರ ವಿಸ್ತಾರವಾಯಿತು.

ತುರಮರಿ ಅವರು ಶಿಕ್ಷಕರಿಗೆ ಕನ್ನಡ ಕಲಿಸುವಿಕೆಯ ಬಗೆಗೆ ಬೋಧಿಸ ತೊಡಗಿದರು. ಆಗ ಬಹಳಷ್ಟು ಜನ ಕನ್ನಡ ಶಿಕ್ಷಕರಿಗೆ ಕನ್ನಡ ಸಾಹಿತ್ಯದ ಬಗೆಗೆ ಹಾಗೂ ಕನ್ನಡ ಭಾಷೆಯ ಬಗೆಗೆ ಸರಿಯಾದ ಜ್ಞಾನವಿರಲಿಲ್ಲ. ಭಾಷೆ ಯನ್ನು ತಪ್ಪುತಪ್ಪಾಗಿ ಬರೆಯುತ್ತಿದ್ದರು. ಹಳಗನ್ನಡ ಕಾವ್ಯಗಳನ್ನು ದೋಷಪೂರ್ಣವಾಗಿ ವಿವರಿಸುತ್ತಿದ್ದರು. ಕನ್ನಡ ಭಾಷೆಯಲ್ಲಿ ಅರ್ಧಕ್ಕರ್ಧ ಮರಾಠಿಪದಗಳು ಸೇರಿಕೊಂಡಿರುತ್ತಿದ್ದವು. ತುರಮರಿ ಅವರು ಮೊದಲು ಇವುಗಳನ್ನೆಲ್ಲ ಸರಿಪಡಿಸಬೇಕಾಯಿತು. ಅನಂತರ ಶಿಕ್ಷಕರಲ್ಲಿ ಕನ್ನಡದ ಬಗೆಗೆ ಉತ್ಕಟ ಪ್ರೇಮ ಹುಟ್ಟಿಸಲು ಕಾರಣರಾದರು.

ಹಳಗನ್ನಡ ಕಾವ್ಯ, ವ್ಯಾಕರಣ, ಲೇಖನ, ಸಂಸ್ಕೃತ ಭಾಷೆ ಇವುಗಳ ಬಗೆಗೆ ತಮ್ಮ ವಿದ್ಯಾರ್ಥಿಗಳಲ್ಲಿ ಅಭಿರುಚಿ ಹುಟ್ಟಿಸಿದರು. ಕನ್ನಡ ಭಾಷೆಯ ಸತ್ವ, ಕನ್ನಡ ಸಾಹಿತ್ಯದ ಸೌಂದರ್ಯದ ಬಗೆಗೆ ಎಲ್ಲರ ಗಮನ ಸೆಳೆದರು. ಹಳಗನ್ನಡ ಕಾವ್ಯಗಳನ್ನು ಎಲ್ಲರೂ ಸುಲಭವಾಗಿ ಓದಿ, ಅರ್ಥ ತಿಳಿಯು ವಂತಾಯಿತು.

ತಪ್ಪುತಪ್ಪಾಗಿ ಬರೆಯಲ್ಪಡುತ್ತಿರುವ ಕನ್ನಡವನ್ನು ತಿದ್ದಿ, ಅದನ್ನು ಪರಿಶುದ್ಧ ರೂಪಕ್ಕೆ ತರಲು ಶಿಕ್ಷಕರಿಗೆ ತರಬೇತಿ ಕೊಟ್ಟರು. ಕನ್ನಡ ಭಾಷೆ ಯಲ್ಲಿ ಮಿಶ್ರಣವಾದ ಮರಾಠಿ ಪದಗಳನ್ನು ಬಿಟ್ಟು ಮಾತನಾಡುವ ಹಾಗೂ ಬರೆಯುವ ರೂಢಿಯನ್ನು ತಂದರು. ಬೆಳಗಾವಿ ವಿಭಾಗದ ಮರಾಠಿ ಪ್ರಭಾವ ದಿಂದ ಕನ್ನಡಕ್ಕೆ ಮುಕ್ತಿ ಕೊಟ್ಟರು. ಕನ್ನಡವು ವಿಕಸನವಾಗುವಂತೆ ಕಷ್ಟ ಪಟ್ಟರು.

ಗಂಗಾಧರ ಮಡಿವಾಳೇಶ್ವರ ತುರಮರಿ ಅವರ ನೂರಾರು ಜನ ಕನ್ನಡಾಭಿಮಾನಿ ಶಿಷ್ಯವೃಂದದಲ್ಲಿ ಎದ್ದು ಕಾಣುವ ಹೆಸರುಗಳೆಂದರೆ, ಶಾಂತ ವೀರ ರಾಚೀದೇವ ಕಿತ್ತೂರ ಹಾಗೂ ಧೋಂಡೋ ನರಸಿಂಹ ಮುಳಬಾಗಲು ಇವರೆಲ್ಲ ಕಳೆದ ಶತಮಾನದಲ್ಲಿ ಕನ್ನಡವನ್ನು ಬೆಳೆಸಲು ದುಡಿದವರು. ಇವರು ಅನೇಕ ಸಾಹಿತ್ಯ ಕೃತಿಗಳನ್ನು ನಿರ್ಮಿಸಿದರು.

## ಬೋಧನೆಯಿಂದ ಭಾಷಾಂತರಕ್ಕೆ

ಗಂಗಾಧರ ತುರಮರಿ ಅವರು ಬೆಳಗಾವಿಗೆ ಬಂದ ಬಳಿಕ ಇಂಗ್ಲಿಷ್ ಭಾಷೆಯ ಅಧ್ಯಯನವನ್ನು ಮಾಡಿದರು. ಇವರು ಸ್ವಂತ ಪರಿಶ್ರಮದಿಂದ ಇಂಗ್ಲಿಷನ್ನು ಆಳವಾಗಿ ಅಭ್ಯಸಿಸಿದ್ದು ವಿಶೇಷ. ಇವರ ಇಂಗ್ಲಿಷ್ ಬರವಣಿಗೆ ತುಂಬ ಅಚ್ಚುಕಟ್ಟಾಗಿತ್ತು.

ಆ ಸಮಯ ಕನ್ನಡ ಪಠ್ಯಪುಸ್ತಕಗಳ ಕೊರತೆ ಇನ್ನೂ ಇದ್ದ ಕಾಲ. 1865ರ ವೇಳೆಗೆ 'ಕನ್ನಡ ಭಾಷಾಂತರ' ಕಚೇರಿಯವರು ಕನ್ನಡ ವಾಚನ ಪುಸ್ತಕದ ಮೊದಲ ನಾಲ್ಕು ಪುಸ್ತಕಗಳನ್ನು ಹೊರತಂದಿದ್ದರು.

ಪಠ್ಯಪುಸ್ತಕಗಳ ರಚನೆಗೆ ಸಹಾಯವಾಗುವಂತೆ ತುರಮರಿ ಅವರನ್ನು ಶಿಕ್ಷಣಾಧಿಕಾರಿಗಳು ಕನ್ನಡ ಭಾಷಾಂತರಕಾರರೆಂದು ವರ್ಗಮಾಡಿದರು. 'ಕನ್ನಡ ಭಾಷಾಂತರ' ಕಚೇರಿಯು ಶಿಕ್ಷಣ ಖಾತೆಗೆ ಸಂಬಂಧಪಟ್ಟ ಸಂಸ್ಥೆಯಾಗಿತ್ತು. ಅದೂ ಕೂಡ ಬೆಳಗಾವಿಯಲ್ಲಿಯೇ ಇತ್ತು.

1866 ಜುಲೈ ತಿಂಗಳಿನಲ್ಲಿ ಗಂಗಾಧರ ತುರಮರಿ ಅವರು ನಾರ್ಮಲ್ ಸ್ಕೂಲಿನ ಮೂರನೆಯ ಸಹಾಯಕ ಅಧ್ಯಾಪಕರಾದವರು ಕನ್ನಡ ಭಾಷಾಂತರ ಕಾರರಾಗಿ ನಿಯುಕ್ತಿ ಹೊಂದಿದರು. ಇದು ಹೆಚ್ಚಿನ ಹುದ್ದೆ, ಟ್ರೇನಿಂಗ್ ಸ್ಕೂಲಿನ ಉಪಪ್ರಾಚಾರ್ಯ ಸ್ಥಾನಕ್ಕೆ ಸರಿಸಮಾನವಾಗಿತ್ತು. ವೆಂಕಟ ರಂಗೋಕಟ್ಟಿ ಅವರು ಮುಖ್ಯ ಭಾಷಾಂತರಕಾರರಾಗಿದ್ದರು.

ಪಠ್ಯ ಪುಸ್ತಕ ನಿರ್ಮಿತಿಗಾಗಿ ರಸೆಲ್ ಅವರ ಮಾರ್ಗದರ್ಶನ ಇದ್ದೇ ಇತ್ತು. ಕಟ್ಟಿ ಹಾಗೂ ತುರಮರಿ ಅವರು ಪಠ್ಯಪುಸ್ತಕ ರಚನಾಕಾರ್ಯದಲ್ಲಿ ತೊಡಗಿದರು. ತುರಮರಿ ಅವರ ಮೇಲೆಯೇ ಪ್ರಾಥಮಿಕ ಮಟ್ಟದ ಪಠ್ಯಗಳ ಬಗೆಗೆ ಹೊಣೆಗಾರಿಕೆ ಬಿದ್ದಿತು. ಹಿಂದಿನ ಪುಸ್ತಕಗಳನ್ನು ತಿದ್ದುವ ಮುಂದಿನ ಪುಸ್ತಕಗಳನ್ನು ರಚಿಸುವ ಕರ್ತವ್ಯ ತುರಮರಿ ಅವರದು.

ಆಗ ಕನ್ನಡ ವಾಚನ ಪುಸ್ತಕಗಳು ಮರಾಠಿಯ ಭಾಷಾಂತರಗಳಾಗಿರುತ್ತಿದ್ದವು. ಕಾವ್ಯವಿಭಾಗದಲ್ಲಿ ಕನ್ನಡ ಕಾವ್ಯಗಳನ್ನು ಸಂಗ್ರಹಿಸಿ, ಪಠ್ಯಗಳಲ್ಲಿ ಸೇರಿಸುವ ಕೆಲಸವನ್ನು ತುರಮರಿ ಅವರೇ ಮಾಡಬೇಕಾಗಿತ್ತು.

18

## ಪ್ರಥಮ ಕಾವ್ಯ ಸಂಗ್ರಾಹಕ

ಭಾಷಾಂತರಕಾರರಾಗಿ ನೇಮಕವಾದ ಬಳಿಕ ತುರಮರಿ ಅವರು ಕೇವಲ ಸರಕಾರಿ ಕೆಲಸದಲ್ಲಿಯೇ ತೃಪ್ತರಾಗಲಿಲ್ಲ. ತಮ್ಮ ಬಿಡುವಿನ ಸಮಯ ಲೇಖನ ವ್ಯವಸಾಯವನ್ನು ಸಾಗಿಸುತ್ತಿದ್ದರು. ಹಳಗನ್ನಡ ಕಾವ್ಯಗಳ ಬಗೆಗೆ ತುರಮರಿ ಅವರಿಗೆ ಮೊದಲಿನಿಂದಲೂ ಅಭಿರುಚಿ. ಆ ಕಾವ್ಯಗಳಿಂದ ಸುಂದರವಾದ ಭಾಗಗಳನ್ನು ಆಯ್ದು 1867ರಲ್ಲಿ 'ಕವಿತಾ ಸಂಗ್ರಹ' ಎಂಬ ಹೆಸರಿನಿಂದ ಪ್ರಕಟಿಸಿದರು. ಹೊಸಗನ್ನಡ ಕಾವ್ಯ ಇನ್ನೂ ಹುಟ್ಟದಿದ್ದಾಗ ಇದೇ ಕನ್ನಡದ ಪ್ರಥಮ ಕಾವ್ಯಸಂಗ್ರಹವಾಗಿದೆ.

ಇದನ್ನು ಸಿದ್ಧಪಡಿಸಲು ತುರಮರಿ ಅವರು ಆರೇಳು ವರ್ಷ ಶ್ರಮಪಟ್ಟಿದ್ದರು. ಇದು ತುರಮರಿ ಅವರ ಕಾವ್ಯದ ಅಭಿರುಚಿಯನ್ನು ಎತ್ತಿ ತೋರುತ್ತದೆ.

ಪ್ರಾರಂಭದ ಕನ್ನಡ ಸಂಕಲಕಾರರಲ್ಲಿ ಗಂಗಾಧರ ತುರಮರಿ ಅವರೇ ಆದ್ಯರು. 19ನೆಯ ಶತಮಾನದ ಆರಂಭದಲ್ಲಿ ಮಿಶನರಿಗಳು ಹಳಗನ್ನಡ ಕಾವ್ಯಗಳನ್ನು ಸ್ವಲ್ಪಮಟ್ಟಿಗೆ ಸಂಗ್ರಹಿಸಿದ್ದಾಗಿ ತಿಳಿದುಬರುತ್ತದೆ. ಆದರೆ ಅವು ಪ್ರಕಟವಾಗಿರಲಿಲ್ಲ. ತುರಮರಿ ಅವರ 'ಕವಿತಾ ಸಂಗ್ರಹ'ವು ಕನ್ನಡ ಕಾವ್ಯ ಸಂಕಲನಕ್ಕೆ ಒಂದು ವಿಶಿಷ್ಟವಾದ ಕೊಡುಗೆ.

ಇಲ್ಲಿ 20 ಕವಿಗಳ ಸುಮಾರು 70 ಕಾವ್ಯಭಾಗಗಳನ್ನು ಆಯ್ದು ಕೊಟ್ಟಿರುವುದಾಗಿ ತುರಮರಿ ಅವರು ಹೇಳಿಕೊಂಡಿದ್ದಾರೆ. ಹಳಗನ್ನಡ ಹಸ್ತಪ್ರತಿಗಳನ್ನು ಹುಡುಕಿಕೊಂಡು ಅವರು ಬೇರೆ ಬೇರೆ ಕಡೆಗಳಿಗೆ ಹೋಗಬೇಕಾಯಿತು. ಅವುಗಳನ್ನು ಪರಿಷ್ಕರಿಸಬೇಕಾಯಿತು. ಆಯಾ ಕವಿಗಳ ಚರಿತ್ರೆ ಸೇರಿಸಿ ವಿವರವಾದ ಟಿಪ್ಪಣಿಗಳನ್ನು ಸಿದ್ಧಪಡಿಸಿದರು. ಈ ಕಾರ್ಯಕ್ಕೆ ತುರಮರಿ ಅವರಿಗೆ ಆರೇಳು ವರ್ಷಗಳೇ ಹಿಡಿದವು.

ತುರಮರಿ ಅವರ ಸಂಕಲನದಲ್ಲಿ ಬಾಸೆಲ್ ಮಿಶನ್ನಿನವರಿಗೆ ದೊರೆತ ಕೃತಿಗಳಲ್ಲದೆ ರಾಘವೇಶ್ವರ ಕಾವ್ಯ, ಸುರಂಗ ಕಾವ್ಯ, ನನ್ನಯ್ಯ ಕಾವ್ಯ, ಹರಿಹರನ ಗಿರಿಜಾ ಕಲ್ಯಾಣ, ಷಡಕ್ಷರಿಯ ಕೃತಿಗಳು ಹಾಗೂ ಸರ್ವಭೂಷಣ ಮೊದಲಾದವರ ಹಾಡುಗಳಿವೆ. ಕುಮಾರ ವಿಭು, ರಾಮ ಬ್ರಹ್ಮಾನಂದ, ಗುರುಬಸವ ಮೊದಲಾದ 19ನೆಯ ಶತಮಾನದವರೂ ಇದರಲ್ಲಿ ಸೇರಿದ್ದಾರೆ. 'ವಿಕ್ಟೋರಿಯಾ ಮಹಾರಾಣಿ'ಯ ಮೇಲಿನ ಕವಿತೆ ತುರಮರಿ ಅವರದೇ

ಇದ್ದಿರಬೇಕೆಂದು ಹೇಳುತ್ತಾರೆ. ಸಮಕಾಲೀನ ಹಾಗೂ ಹಳೆಯ ಕವಿಗಳನ್ನು ಒಂದೆಡೆ ತುರಮರಿ ಅವರು ಸೇರಿಸಿದ್ದರು.

ಷಡಕ್ಷರಿಯು ತುರಮರಿ ಅವರ ನೆಚ್ಚಿನ ಕವಿ. ಈ ಸಂಗ್ರಹದ ಅರ್ಧ ಭಾಗವು ಆತನಿಗೇ ಮೀಸಲಾಗಿದೆ.

ಈ ಕವಿತಾ ಸಂಗ್ರಹದ ಉದ್ದೇಶವನ್ನು ಸಂಕಲನಕಾರರು ಈ ರೀತಿ ಹೇಳಿಕೊಂಡಿದ್ದಾರೆ :

"......ಕಾವ್ಯದಲ್ಲಿ ರಸವೊದಗುವುದು, ಕಾಳಗದಲ್ಲಿ ಜಯ ಹೊಂದುವುದು ಎಲ್ಲರಿಗೂ ಸಾಧಿಸದು. 'ಕಾವ್ಯಕ್ಕೆ ಕಾಲ, ತಪಸ್ಸಿಗೆ ಮುಪ್ಪು ಶೋಭೆ' ಎಂಬ ಗಾದೆಯುಂಟು. ಕರ್ನಾಟಕ ಭಾಷಾಭಿಜ್ಞರೆಂತಲೂ, ರಸಿಕರೆಂತಲೂ ಹೆಸರು ಪಡೆದವರ ಗ್ರಂಥಗಳನ್ನು ಓದುವುದು ನಮಗೆ ಅತ್ಯವಶ್ಯವು. ಆದುದರಿಂದ ಅಂಥವರ ಗ್ರಂಥಗಳನ್ನು ಕೈಲಾದ ಮಟ್ಟಿಗೆ ಕೂಡಿಸಿ, ಅವುಗಳಲ್ಲಿರುವ ಮೇಲಾದ ವಿಷಯಗಳನ್ನೂ, ಪದ್ಯಗಳನ್ನೂ ಆರಿಸಿಕೊಂಡು ಇದೊಂದು 'ಕವಿತಾ ಸಂಗ್ರಹ'ವೆಂಬ ಪುಸ್ತಕವ ಮಾಡಿದ್ದೇವೆ......ಆರಂಭದಲ್ಲಿ ಪ್ರಸಿದ್ಧವಾದ ಕವಿಗಳ ಚರಿತ್ರೆಗಳನ್ನೂ ತಿಳಿದಮಟ್ಟಿಗೆ ವಿವರಿಸಿದ್ದೇವೆ......"

ಇದರಿಂದ ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಕನ್ನಡದ ಪ್ರಥಮ ಕಾವ್ಯ ಸಂಗ್ರಹಕಾರರೆಂದು ಹೇಳಬೇಕು.

## ಸಮಾಜ ಸೇವೆ

1867ರಲ್ಲಿಯೇ ಒಂದು ಪ್ರಸಂಗ ಜರುಗಿತು. ಉತ್ತರ ಕನ್ನಡ ಜಿಲ್ಲೆಯ ಉಳವಿಯ ಮಹಾಕ್ಷೇತ್ರದಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಆಗ ಚಿತ್ರದುರ್ಗದ ಮಹಾಲಿಂಗ ಸ್ವಾಮಿಗಳು ಜಾತ್ರೆಯಲ್ಲಿ ಸೇರಿದ ಸಾರ್ವಜನಿಕರಿಗೆ ಭೋಜನದ ವ್ಯವಸ್ಥೆ ಮಾಡುತ್ತಲಿದ್ದರು. ಊಟದ ಸಮಾರಂಭಕ್ಕೆ ಸಾವಿರಾರು ಜನ ಸೇರುತ್ತಿದ್ದರು. ಪ್ರತಿ ಸಲ ಮಹಾ ಸಮಾರಾಧನೆ ನಡೆಯುತ್ತಿತ್ತು.

1867ರಲ್ಲಿ ಡೆಪ್ಯುಟಿ ಚೆನ್ನಬಸಪ್ಪನವರು ಉಳವಿ ಜಾತ್ರೆಗೆ ಹೋಗಿ

ದ್ದರು. ಅಲ್ಲಿ ನಡೆಯುತ್ತಿರುವ ವ್ಯರ್ಥ ಸಮಾರಾಧನೆ ಅವರ ಕಣ್ಣಿಗೆ ಬಿದ್ದಿತು. ವ್ಯರ್ಥವಾದ ಅನ್ನದ ಬಳಕೆ ಹಾಗೂ ಹಿಡಿತವಿಲ್ಲದ ವೆಚ್ಚದ ಬಗೆಗೆ ಅವರು ನೊಂದುಕೊಂಡರು. "ಜಾತ್ರೆಯಲ್ಲಿ ಜನ ತಿಂದು ಹಾಳು ಮಾಡು ತ್ತಾರೆ" ಎಂದು ಚೆನ್ನಬಸಪ್ಪ ಉದ್ಗಾರ ತೆಗೆದರು.

ಚೆನ್ನಬಸಪ್ಪ ಸ್ವಾಮಿಗಳವರ ಹತ್ತಿರ ಹೋಗಿ ವ್ಯರ್ಥವಾದ ವೆಚ್ಚದ ಬಗೆಗೆ ಹೇಳಿದರು. ಅಲ್ಲದೆ ಇದೇ ಖರ್ಚಿನಿಂದ ಬಡ ವಿಧ್ಯಾರ್ಥಿಗಳಿಗೆ ಪ್ರಸಾದದ ವ್ಯವಸ್ಥೆ ಮಾಡಿದರೆ, ಸಮಾಜದ ಪ್ರಗತಿಯಾಗುವದೆಂದು ತಿಳಿ ಹೇಳಿದರು. ಚೆನ್ನಬಸಪ್ಪನವರ ಸಲಹೆ ಸ್ವಾಮಿಗಳವರಿಗೆ ಯೋಗ್ಯವಾಗಿ ಕಂಡಿತು. ಪ್ರಸಾದ ನಿಲಯದ ಎಲ್ಲ ವೆಚ್ಚವನ್ನು ಸ್ವಾಮಿಗಳು ಕೊಡಲು ಒಪ್ಪಿಕೊಂಡರು.

1868ರಲ್ಲಿ ಬೆಳಗಾವಿಯಲ್ಲಿ 'ವೀರಶೈವ ವಿದ್ಯಾರ್ಥಿ ನಿಲಯ' ಸ್ಥಾಪಿತವಾಯಿತು. ಚಿತ್ರದುರ್ಗದ ಮಹಾಲಿಂಗ ಸ್ವಾಮಿಗಳು ಈ ಬೋರ್ಡಿಂ ಗಿನ ವೆಚ್ಚವನ್ನು ನಿರ್ವಹಿಸಿಕೊಂಡರು. ಈ ಪ್ರಸಾದನಿಲಯದ ಮೇಲ್ವಿ ಚಾರಣೆಯ ಹೊಣೆ ತುರಮರಿ ಅವರ ಮೇಲೆ ಬಿದ್ದಿತು. ಪ್ರಾರಂಭದಲ್ಲಿ 50 ವಿದ್ಯಾರ್ಥಿಗಳಿಗೆ ಅವಕಾಶವಾಯಿತು. ಚೆನ್ನಬಸಪ್ಪ ಮತ್ತು ತುರಮರಿ ಅವರು ಯೋಗ್ಯ ವಿದ್ಯಾರ್ಥಿಗಳಿಗಾಗಿ ಅತ್ತಿತ್ತ ಶೋಧನೆ ನಡೆಯಿಸಿ ಆಯ್ದು ತಂದಿದ್ದರು. ಇಂಗ್ಲಿಷ್ ಕಲಿಯಬಯಸುವ ಪ್ರೌಢ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿದ್ದರು.

'ವೀರಶೈವ ಬೋರ್ಡಿಂಗ್' ಬೆಳಗಾವಿಯ ಕೇಳಕದ ಭಾಗದಲ್ಲಿತ್ತು. ತಮ್ಮ ಕಚೇರಿಯ ಕೆಲಸ ತೀರಿಸಿ ತುರಮರಿ ಅವರು ಪ್ರತಿದಿನ ಸಂಜೆ ಪ್ರಸಾದನಿಲಯಕ್ಕೆ ಬರುತ್ತಲಿದ್ದರು. ವಿದ್ಯಾರ್ಥಿಗಳಿಗೆ ಪಾಠ ಹೇಳಿ ಕೊಡುತ್ತಲಿದ್ದರು. ಕನ್ನಡ ಇಂಗ್ಲಿಷ್ ಭಾಷೆಗಳನ್ನು ಕಲಿಸುತ್ತಿದ್ದರು. ಉಳಿದ ವಿಷಯಗಳ ಬೋಧನೆಯೂ ನಡೆಯುತ್ತಲಿತ್ತು.

ಪ್ರಸಾದನಿಲಯದ ವೆಚ್ಚದ ವಿವರ ತುರಮರಿ ಅವರೇ ಬರೆದಿಡ ಬೇಕಾಗುತ್ತಿತ್ತು. ಖರೀದಿ, ವೆಚ್ಚ ಎಲ್ಲ ಹೊಣೆ ಇವರ ಮೇಲೆ. ಹಿಂದುಳಿದ ಸಮಾಜದ ವಿದ್ಯಾರ್ಥಿಗಳ ಪ್ರಗತಿಗಾಗಿ ತುರಮರಿ ಅವರು ಕಳಕಳಿಯಿಂದ ದುಡಿದರು.

ವಿದ್ಯಾರ್ಥಿ ನಿಲಯ ಒಂದು ಬಾಡಿಗೆಯ ಮನೆಯಲ್ಲಿತ್ತು. ಚಿತ್ರ ದುರ್ಗದ ಸ್ವಾಮಿಗಳವರು ವೆಚ್ಚಕ್ಕೆ ತಿಂಗಳಿಗೆ ಮುನ್ನೂರು ರೂಪಾಯಿ

ಗಳನ್ನು ಕಳುಹಿಸಿಕೊಡುತ್ತಲಿದ್ದರು. ಇಷ್ಟು ಹಣದಲ್ಲಿ ತುರಮರಿ ಅವರು ಅಚ್ಚುಕಟ್ಟಾಗಿ ಎಲ್ಲ ವ್ಯವಸ್ಥೆ ಮಾಡುತ್ತಿದ್ದರು. ವಿದ್ಯಾರ್ಥಿಗಳ ಹಿತಕ್ಕಾಗಿ ತಮ್ಮ ಬಿಡುವಿನ ವೇಳೆಯನ್ನು ವಿನಿಯೋಗಿಸಬೇಕಾಯಿತು.

## ಕನ್ನಡಕ್ಕೆ ಮಹದುಪಕಾರ

ಆಗಿನ ಮುಂಬಯಿ ರಾಜ್ಯದ ದಕ್ಷಿಣ ವಿಭಾಗದ ಶಿಕ್ಷಣಾಧಿಕಾರಿ ವಿಲಿಯಂ ರಸೆಲ್ ಅವರು ಮತ್ತು ಸಹಾಯಕರಾದ ಡೆಪ್ಯುಟಿ ಚೆನ್ನಬಸಪ್ಪ ನವರು ಗಂಗಾಧರ ಮಡಿವಾಳೇಶ್ವರ ತುರಮರಿ ಅವರ ವಿದ್ವತ್ತನ್ನು ಅರಿತು ಕೊಂಡವರಾಗಿದ್ದರು. ಪಠ್ಯಪುಸ್ತಕ ರಚನಾಕಾರ್ಯ ತುರಮರಿ ಅವರ ಮೇಲೆ ಬಿದ್ದಿತ್ತು. ತುರಮರಿ ಅವರು ಪಠ್ಯಗಳ ಜತೆಗೆ ಪಠ್ಯೇತರ ಕೃತಿಗಳ ನಿರ್ಮಾಣಕ್ಕೂ ತೊಡಗಿದರು. ತುರಮರಿ ಅವರು ಈ ಕೆಲಸವನ್ನು ಎಲ್ಲರೂ ತೃಪ್ತಿ ಪಡುವಂತೆ ಮಾಡಿದರು.

ಇವರು ಕನ್ನಡ ಸಾಹಿತ್ಯ ಹಾಗೂ ಶಿಕ್ಷಣ ರಂಗದಲ್ಲಿ ಅನುಭವ ಪಡೆದ ವರು, ಪಾಂಡಿತ್ಯ ಗಳಿಸಿದವರು. ತುರಮರಿ ಅವರು ಮೊದಲಿನ ಪಠ್ಯ ಪುಸ್ತಕಗಳನ್ನು ಸುಧಾರಿಸಿದರು. ಮತ್ತು ಹೊಸ ಪಠ್ಯಗಳನ್ನು ರಚಿಸಿದರು. ವಿವಿಧ ವಿಷಯಗಳನ್ನು ಸಂಗ್ರಹಿಸಿ ಪಠ್ಯದಲ್ಲಿ ಸೇರಿಸಿದರು. ಕವಿತೆಗಳನ್ನು ಕಲಿಸಲು ಸಹಾಯಕವಾಗುವಂತೆ ಶಿಕ್ಷಕರಿಗಾಗಿ 'ಕವಿತಾ ಪದ್ಧತಿ'ಯನ್ನು ರೂಪಿಸಿದರು.

ವ್ಯಾಕರಣವನ್ನು ಕಲಿಸಲು ಅನುಕೂಲವಾಗುವಂತೆ ಶಿಕ್ಷಕರ ಮಾರ್ಗ ದರ್ಶನಕ್ಕಾಗಿ 'ಭಾಷಾದರ್ಪಣ'ವನ್ನು ಬರೆದರು. ತುರಮರಿ ಅವರು ರಚಿಸಿದ 'ಶಬ್ದ ಮಂಜರಿ' ಕನ್ನಡ ಬೋಧಕರಿಗೆ ಹಾಗೂ ಸಾಹಿತ್ಯ ಅಭ್ಯಾಸಿಗಳಿಗೆ ತುಂಬಾ ಉಪಕಾರ ಮಾಡಿತು.

ಇವರ ಪರಿಶ್ರಮದ ಅತಿಯಾದ ಪರಿಣಾಮವೆಂದರೆ, ಕನ್ನಡವು ಪ್ರೌಢ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮವಾಗಲು ಅರ್ಹತೆ ಪಡೆಯಿತು. ಆಗ ಪ್ರೌಢ ಶಾಲೆಗಳಲ್ಲಿ ಮಾತ್ರ ಭಾಷೆಯನ್ನುಳಿದು ಎಲ್ಲ ವಿಷಯಗಳನ್ನು ಆಂಗ್ಲ ಭಾಷೆ ಯಲ್ಲಿಯೇ ಬೋಧಿಸುತ್ತಿದ್ದರು.



**ಪಠ್ಯಪುಸ್ತಕ ರಚನಾಕಾರ್ಯ ತುರಮರಿ ಅವರ ಮೇಲೆ ಬಿದ್ದಿತು**

ತುರಮರಿ ಅವರ ಸೇವೆಯಿಂದ ಕನ್ನಡ ಶಾಲೆಗಳ ಸಂಖ್ಯೆ ಹೆಚ್ಚತೊಡಗಿತು. ಕನ್ನಡದಲ್ಲಿ ಪಠ್ಯ ಪುಸ್ತಕಗಳು ಲಭ್ಯವಾಗತೊಡಗಿದವು. ಶಿಕ್ಷಕರಿಗೆ ಉಪಯುಕ್ತವಾದ ಪುಸ್ತಕಗಳು ಹೊರಬಂದವು. ಕನ್ನಡ ಶಿಕ್ಷಕರು ಕನ್ನಡ ಸಾಹಿತ್ಯದ ಅಭಿಮಾನಿಗಳಾದರು. ಕನ್ನಡ ಪ್ರಸಾರಕರಾದರು.

## 'ಶಬ್ದ ಮಂಜರಿ' ರಚನೆ : ರಸೆಲ್ ಅವರ ಉಪಕಾರ ಸ್ಮರಣೆ

ಮುಂಬಯಿ ಇಲಾಖೆಯ ದಕ್ಷಿಣ ವಿಭಾಗದ ಶಿಕ್ಷಣಾಧಿಕಾರಿಯಾಗಿ ವಿಲಿಯಂ ಅಲೆನ್ ರಸೆಲ್ ಅವರ ನೇಮಕವಾಗಿದ್ದು ಕನ್ನಡನಾಡಿನ ಪುಣ್ಯ. ವಿದೇಶಿಯರಾದ ಮಹಾನುಭಾವ ಕನ್ನಡಕ್ಕೆ ಮಾಡಿದ ಉಪಕಾರ ಅಷ್ಟಿಷ್ಟಲ್ಲ.

ಉತ್ತರ ಕರ್ನಾಟಕದ ಪ್ರಜೆಗಳ ಮಾತೃಭಾಷೆ ಕನ್ನಡ ಎಂದು ಕಾಳಜಿ ಮಾಡಿದ ಪ್ರಥಮ ಆಂಗ್ಲ ಅಧಿಕಾರಿ ಇವರು. 1866 ಮೇ ತಿಂಗಳಲ್ಲಿ ಶಿಕ್ಷಣಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿದ್ದರು. ಒಬ್ಬ ಪಂಡಿತರಿಂದ ಮನೆಯಲ್ಲಿ ಕನ್ನಡ ಕಲಿತ ಕನ್ನಡಾಭಿಮಾನಿಗಳಿವರು.

ಕನ್ನಡ ಭಾಷಾ ಬೆಳವಣಿಗೆಗಾಗಿ ರಸೆಲ್ ತುಂಬ ದುಡಿದರು. ಸರಿಯಾಗಿ ಕನ್ನಡ ಭಾಷೆಯ ಶಿಕ್ಷಣ ದೊರೆಯುವಂತೆ ಉಚಿತ ಏರ್ಪಾಟನ್ನು ಮಾಡಿದರು. ಡೆಪ್ಯುಟಿ ಚೆನ್ನಬಸಪ್ಪ, ಗಂಗಾಧರ ಮಡಿವಾಳೇಶ್ವರ ತುರಮರಿ ಹಾಗೂ ಅನೇಕ ಕನ್ನಡ ವಿದ್ವಾಂಸರನ್ನು ಕಂಡು, ಅವರಿಂದ ಕನ್ನಡಕ್ಕೆ ಸೇವೆ ಆಗುವಂತೆ ವ್ಯವಸ್ಥೆ ಮಾಡಿದರು. ತುರಮರಿ ಅವರ ವಿದ್ವತ್ತನ್ನು ಕಂಡು ಕೊಂಡೇ ಇವರನ್ನು ಪಠ್ಯಪುಸ್ತಕ ನಿರ್ಮಿಸಲು ತೊಡಗಿಸಿದರು.

ರಸೆಲ್ ಅವರು ಬರುವ ಪೂರ್ವದಲ್ಲಿ ಕನ್ನಡದಲ್ಲಿ ಮೂರು ಪ್ರಾಥಮಿಕ ದರ್ಜೆಯ ಪಠ್ಯಪುಸ್ತಕಗಳಿದ್ದವು. ಮರಾಠಿಯ ಜತೆ ಕನ್ನಡ ಕಲಿಸುತ್ತಿದ್ದ ಕೆಲವು ಶಾಲೆಗಳಲ್ಲಿ ಮಂಗಳೂರಿನ ಮಿಶನರಿಯವರು ತಯಾರಿಸಿದ್ದ ಕನ್ನಡ ಪಠ್ಯಪುಸ್ತಕಗಳನ್ನು ಉಪಯೋಗಿಸುತ್ತಿದ್ದರು.

ದಕ್ಷಿಣ ಭಾಗಕ್ಕೆ ಪುಣೆಯಿಂದ ಸ್ಥಳಾಂತರಿಸಿದ ಒಂದು ಕನ್ನಡ ಭಾಷಾಂತರಕಾರನ ಜಾಗೆಗೆ ಒಬ್ಬ ಮರಾಠಿಯವನನ್ನು ನೇಮಿಸಲಾಗಿತ್ತು. ರಸೆಲ್ ಅವರು ಈ ವಿರೋಧಾಭಾಸವನ್ನು ಕಂಡುಹಿಡಿದರು. ಅದನ್ನು ಬದಲಾಯಿಸಿದರು. ಗಂಗಾಧರ ತುರಮರಿ ಅವರನ್ನು ಆ ಸ್ಥಳಕ್ಕೆ ನಿಯುಕ್ತಿ ಮಾಡಿದರು, ತುರಮರಿ ಅವರು ರಸೆಲ್ ಅವರ ಉಪಕಾರವನ್ನು ಎಂದೂ ಮರೆಯಲಿಲ್ಲ.

ಕನ್ನಡ ಭಾಷೆಗೆ ಅಮೋಘ ಕೊಡುಗೆಯಾಗಿ ಬಂದ ಕಿಟೆಲ್ ಅವರ 'ಕನ್ನಡ–ಇಂಗ್ಲಿಷ್ ನಿಘಂಟು' ಪ್ರಕಟವಾಗುವ ಕಾಲು ಶತಮಾನದ ಪೂರ್ವದಲ್ಲಿಯೇ ಕ್ರಿ.ಶ. 1869ರಲ್ಲಿ ಗಂಗಾಧರ ಮಡಿವಾಳೇಶ್ವರ ತುರಮರಿ ಅವರ 'ಶಬ್ದ ಮಂಜರಿ' ಪ್ರಕಟವಾಯಿತು. ಹಳಗನ್ನಡ ಕಾವ್ಯವನ್ನು ಅಧ್ಯಯನ

ಮಾಡುವ ಹಾಗೂ ಬೋಧನೆ ಮಾಡುವ ಪಂಡಿತರಿಗೆ ತುರಮರಿ ಅವರ ಶಬ್ದ ಕೋಶ ವಿಶೇಷ ಮಾರ್ಗದರ್ಶಿಯಾಯಿತು.

ಈ 'ಶಬ್ದಮಂಜರಿ'ಯು ಸುಮಾರು 600 ಪುಟಗಳ ಪಾಶ್ಚಾತ್ಯ ಪದ್ಧತಿಯಿಂದ ರಚಿತವಾದ ಮೊದಲ ಕನ್ನಡಕೋಶವಾಗಿದೆ. ಇದರಲ್ಲಿ ಹದಿನೇಳು ಸಾವಿರ ಪದಗಳಿವೆ. ಈ ಶಬ್ದಗಳನ್ನು ಸಂಸ್ಕೃತ, ಹಳಗನ್ನಡ ಹಾಗೂ ತದ್ಭವಗಳೆಂದು ವಿಂಗಡಿಸಲಾಗಿದೆ. ಈ ಕೋಶವನ್ನು ನಿರ್ಮಿಸುವುದರಲ್ಲಿ ತುರಮರಿ ಅವರ ಅಸಾಧಾರಣ ಶಾಬ್ದಿಕ ಸಂಪತ್ತಿನ ಸಂಗ್ರಹ ಪಂಡಿತರನ್ನು ಬೆರಳು ಕಚ್ಚುವಂತೆ ಮಾಡುತ್ತದೆ.

ಅಂದಿನ ಕಾಲದಲ್ಲಿ ಇದು ತುರಮರಿ ಅವರ ಮಹಾಸಾಧನೆ. ಷಡಕ್ಷರದೇವನ 'ರಾಜಶೇಖರ ವಿಳಾಸ' 'ವೃಷಭೇಂದ್ರ ವಿಜಯ' 'ಶಬರಶಂಕರ ವಿಳಾಸ' ಇಂತಹ ಪ್ರೌಢ ಕಾವ್ಯಗಳ ಅಧ್ಯಯನದ ಜೊತೆಗೆ ಜೈಮಿನಿ ಭಾರತದಂಥ ಪಟ್ಪದೀ ಕಾವ್ಯಗಳ ಅಧ್ಯಯನಕ್ಕೂ ಈ ಕೃತಿ ತುಂಬ ಅನುಕೂಲವಾಗಿದೆ.

ದಕ್ಷಿಣ ವಿಭಾಗದ ಶಿಕ್ಷಣಾಧಿಕಾರಿಗಳಾದ 'ಮೆಹರ್ಬಾನ್ ರಸೆಲ್ ಸಾಹೇಬ್ ಬಹಾದ್ದೂರ್' ಈ ದೊರೆಗಳಿಗೆ ಶಾಲಿವಾಹನ ಶಕ 1792 ಶುಕ್ಲ ಸಂವತ್ಸರದಲ್ಲಿ ಈ ಗ್ರಂಥವನ್ನು ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಅರ್ಪಣೆ ಮಾಡಿದ್ದಾರೆ. ರಸೆಲ್ ಅವರ ಬಗೆಗಿನ ಉಪಕಾರವನ್ನು ತುರಮರಿ ಅವರು ಸ್ಮರಿಸಿದ್ದಾರೆ.

ರಸೆಲ್ ಅವರೇ ಕನ್ನಡ ಭಾಷಿಕರಿಗೆ ಅತ್ಯುಪಯುಕ್ತವಾಗುವಂತೆ ಈ ನಿಘಂಟನ್ನು ರಚಿಸಲು ತುರಮರಿ ಅವರಿಗೆ ಸಲಹೆ ಕೊಟ್ಟಿದ್ದರು.

ಈ ಗ್ರಂಥ ಪ್ರಕಟಣೆಗೆ ಮುಂಬಯಿ ಸರಕಾರದವರು ನಾಲ್ಕು ಸಾವಿರ ರೂಪಾಯಿಗಳ ಧನ ಸಹಾಯ ಮಾಡಿದರು. ಇದರ ಪ್ರಥಮ ಆವೃತ್ತಿಯ ಎಲ್ಲ ಪುಸ್ತಕಗಳು ಹತ್ತು ವರ್ಷಗಳಲ್ಲಿ ಮುಗಿದುಹೋದವು. ಮುಂದೆ ಧಾರವಾಡದ ಅನಾಡ ಚೆನ್ನವೀರಪ್ಪನವರು, ತುರಮರಿಯವರು ತೀರಿಹೋದ ಕೆಲ ವರ್ಷಗಳಲ್ಲಿಯೇ ದ್ವಿತೀಯ ಆವೃತ್ತಿಯನ್ನು ಪ್ರಕಟಿಸಿದರು.

## ರಾಜಶೇಖರವಿಳಾಸದ ಟೀಕೆಗಳು

ಸಂಸ್ಕೃತ ಹಾಗೂ ಕನ್ನಡ ವಿದ್ವಾಂಸನಾದ ಷಡಕ್ಷರದೇವ ಕವಿಯನ್ನು ಉಭಯಭಾಷಾ ಪಂಡಿತರೇ ಅರಿತುಕೊಳ್ಳಬೇಕು. ಗಂಗಾಧರ ಮಡಿವಾಳೇಶ್ವರ ತುರಮರಿ ಅಂಥವರೇ ಅದಕ್ಕೆ ಯೋಗ್ಯರು. ಬಹಳಷ್ಟು ಜನ ಕನ್ನಡ ವ್ಯಾಖ್ಯಾನಕಾರರನ್ನು ಆಕರ್ಷಿಸಿದ ಕಾವ್ಯವೆಂದರೆ ಷಡಕ್ಷರಿ ಕವಿಯ ರಾಜಶೇಖರವಿಳಾಸವೇ ಆಗಿದೆ.

ರಾಜಶೇಖರವಿಳಾಸವನ್ನು ಕರತಲಾಮಲಕ ಮಾಡಿಕೊಂಡ ವಿದ್ವಾಂಸರಲ್ಲಿ ತುರಮರಿ ಅವರು ಪ್ರಮುಖರು. ಷಡಕ್ಷರಿಯು ತುರಮರಿ ಅವರಿಗೆ ಅತ್ಯಂತ ಪ್ರಿಯನಾದ ಕವಿಯು.

1871ರಲ್ಲಿ ತುರಮರಿ ಅವರು ಬರೆದ ರಾಜಶೇಖರವಿಳಾಸದ ಪ್ರಥಮ ಆಶ್ವಾಸದ ಟೀಕೆ ಪ್ರಕಟವಾಯಿತು. ಇದು ಬೆಳಗಾವಿಯ ಸಮಾಚಾರ ಪ್ರೆಸ್ಸಿನಲ್ಲಿ ಮುದ್ರಣಗೊಂಡಿದೆ. ಇದರಲ್ಲಿ 131 ಪುಟಗಳಿವೆ. ಈ ಪುಸ್ತಕದ ಪೀಠಿಕೆಯಲ್ಲಿ ತುರಮರಿಯವರು ಷಡಕ್ಷರ ದೇವನ ಕೃತಿ, ವಂಶ, ಪಾಂಡಿತ್ಯ ಇವುಗಳ ಬಗೆಗೆ ತಿಳಿಸಿದ್ದಾರೆ ಮತ್ತು ರಾಜಶೇಖರ ವಿಳಾಸದ ಕಥಾಸಾರಾಂಶವನ್ನೂ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಅನ್ವಯ ಭಾವಾರ್ಥಗಳ ಜೊತೆಗೆ ಛಂದಸ್ಸು, ವ್ಯಾಕರಣ, ಅಲಂಕಾರ ಮತ್ತಿತರ ಅಂಶಗಳನ್ನು ಪ್ರತಿ ಪದ್ಯಕ್ಕೂ ವಿವರಿಸಿದ್ದಾರೆ.

ರಾಜಶೇಖರ ವಿಳಾಸವು ರಸಿಕರ ಮನಸ್ಸನ್ನು ಸೂರೆಗೊಂಡಿದೆ. ಆದರೂ ಹಳಗನ್ನಡ ಮತ್ತು ಸಂಸ್ಕೃತಗಳಿಂದಾಗಿ ಇದರ ಆಸ್ವಾದನೆಯು ತೊಂದರೆದಾಯಕವಾಗಿದೆ. ಈ ಅಡ್ಡಿಯನ್ನು ನೀಗಿ ಓದುಗರ ಇಚ್ಛೆಯನ್ನು ಪೂರ್ಣ ಮಾಡಲು ಈ ಟೀಕೆಯನ್ನು ಬರೆದುದಾಗಿ ತುರಮರಿಯುವರು ಹೇಳಿಕೊಂಡಿದ್ದಾರೆ.

ರಾಜಶೇಖರ ವಿಳಾಸದ ಟೀಕೆಯು ಹೊಸಗನ್ನಡದಲ್ಲಿ ಇದ್ದುದರಿಂದ ಅಂದಿನ ಕನ್ನಡ ಬರವಣಿಗೆಯ ಮಾದರಿಯನ್ನು ಕಾಣಬಹುದಾಗಿದೆ.

ಆಗ ಮುಂಬಯಿ ಇಲಾಖೆಯ ವಿದ್ಯಾಖಾತೆಯ ಮುಖ್ಯ ನಿರ್ದೇಶಕರಾಗಿದ್ದ ಮೆ। ಪೀಲ್ ಸಾಹೇಬರು ತುರಮರಿಯವರ ಈ ಗ್ರಂಥವನ್ನು ಕಂಡು ಸಂತೋಷದಿಂದ ಇನ್ನೂರು ರೂಪಾಯಿಗಳ ಬಹುಮಾನವನ್ನು ಕೊಟ್ಟರು.

ಅಲ್ಲದೆ ಈ ಪುಸ್ತಕದ ಮುದ್ರಣ ವೆಚ್ಚ 430 ರೂ.ಗಳನ್ನು ತುರಮರಿ ಅವರಿಗೆ ಕೊಟ್ಟರು. ಅಲ್ಲದೆ 800 ಪ್ರತಿಗಳನ್ನು ವಿದ್ಯಾಖಾತೆಯು ವತಿಯಿಂದ ಸಗಟಾಗಿ ಖರೀದಿಸಿದರು.

ಪ್ರೋತ್ಸಾಹ ಕೊಡುವ ದೃಷ್ಟಿಯಿಂದ ರಾಜಶೇಖರವಿಳಾಸದ ಮುಂದಿನ ಆಶ್ವಾಸಗಳಿಗೆ ಟೀಕೆ ಬರೆದವರಿಗೆ ಕೂಡ ಇನ್ನೂರು ರೂಪಾಯಿ ಗಳಂತೆ ಬಹುಮಾನ ಕೊಡುವುದಾಗಿ ಪೀಲ್ ಸಾಹೇಬರು ಆಶ್ವಾಸನವಿತ್ತು ತಿಳಿಯಪಡಿಸಿದರು. ಮುಂದೆ 2ನೆಯ ಆಶ್ವಾಸದ ಟೀಕೆಯನ್ನು. ಶಾಂತವೀರ ರಾಚಿದೇವ ಕಿತ್ತೂರ ಅವರು, 3ನೆಯ ಆಶ್ವಾಸದ ಟೀಕೆಯನ್ನು ಅನ್ನದಾನಿ ಬಸವಲಿಂಗಾರ್ಯ ಅರಳಿಲೆಮಠ ಎಂಬುವರು ತುರಮರಿ ಅವರ ಪದ್ಧತಿ ಯನ್ನೇ ಅನುಸರಿಸಿ ಬರೆದರು.

ಮತ್ತೆ 4ನೆಯ ಆಶ್ವಾಸಕ್ಕೆ ತುರಮರಿ ಅವರೇ ವ್ಯಾಖ್ಯಾನ ಬರೆದು 1874 ಡಿಸೆಂಬರ್ ತಿಂಗಳಿನಲ್ಲಿ ಪ್ರಕಟಿಸಿದರು.

## ಆಧುನಿಕ ಕನ್ನಡ ಭಾಷೆಯ ಆದ್ಯ ಪ್ರವರ್ತಕ : ಅನುವಾದಕ

ಭಾರತೀಯ ಸಾಹಿತ್ಯದಲ್ಲಿ ಪದ್ಯ ಕವಿಗಳಲ್ಲಿ ಕಾಳಿದಾಸನಿಗೆ ಯಾವ ಬಗೆಯ ಮರ್ಯಾದೆ ಇದೆಯೋ, ಗದ್ಯ ಕವಿಗಳಲ್ಲಿ ಬಾಣನಿಗೆ ಅದೇ ಬಗೆಯ ಗೌರವವಿದೆ. ಕನ್ನಡಕವಿಗಳು ಬಾಣನ ಸಂಸ್ಕೃತ ಗದ್ಯರಚನೆಯನ್ನು ಮಾದರಿ ಎಂದು ತಿಳಿದಿದ್ದರು. ತಮ್ಮ ಚಂಪೂ ಕೃತಿಗಳಲ್ಲಿ ಅಷ್ಟಿಷ್ಟು ಗದ್ಯ ಕೌಶಲ್ಯ ವನ್ನು ತೋರಿದರು. ಆದರೆ ಸ್ವತಂತ್ರ ಗದ್ಯರಚನೆ ಮಾಡಲಿಲ್ಲ.

ಬಾಣ ಕಾದಂಬರಿಯನ್ನು ಅಳವಡಿಸಲು ಹೊರಟ ನಾಗವರ್ಮನು ಕೂಡ ಒಂದು ಚಂಪೂಕಾವ್ಯವನ್ನೇ ಬರೆದನು. ನಾಗವರ್ಮನ ಈ 'ಕರ್ಣಾಟಕ ಕಾದಂಬರಿ'ಯನ್ನು ಕೆಲವರು ತಿಳಿಯಾದ ಕನ್ನಡದಲ್ಲಿ ಸಂಕ್ಷೇಪಿಸಿದ್ದಾರೆ.

ಆದರೆ ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಬಾಣ ಕಾದಂಬರಿಯನ್ನು ಅನುವಾದಿಸಿದ ರೀತಿಗೆ ಆ ಯಾವ ಕೃತಿಗಳೂ ಸರಿಸಮಾನ ವಾಗುವುದಿಲ್ಲ. ತುರಮರಿ ಅವರ ಬಾಣ ಕಾದಂಬರಿಯ ಕನ್ನಡ ಅನುವಾದವು 1876ರಲ್ಲಿ ಹೊರಬಂದಿತು. ಇವರ ಕನ್ನಡ ಅನುವಾದವು ಲೇಖಕರ ಹಾಗೂ ಓದುಗರ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿತು.

ತುರಮರಿ ಅವರ ಅನುವಾದವು ಹೊಸಗನ್ನಡ ಗದ್ಯಶೈಲಿಗೆ ತಳಹದಿಯಾಯಿತು. ಕಳೆದ ಶತಮಾನದ ಉತ್ತರಾರ್ಧದಲ್ಲಿ ಕೂಡ ಕನ್ನಡದಲ್ಲಿ ಸ್ವತಂತ್ರ ಕೃತಿಗಳು ಹೊರಬಂದಿರಲಿಲ್ಲ. ಅನೇಕ ಅನುವಾದಗಳು ಬರುತ್ತಲಿದ್ದರೂ, ಅವುಗಳ ಕನ್ನಡ ಭಾಷಾ ಶೈಲಿ, ಶಿಷ್ಟ ಹಾಗೂ ಬಂಧುರವಾಗಿರಲಿಲ್ಲ. ವಾಕ್ಯರಚನೆ, ಕಾಗುಣಿತಗಳಲ್ಲಿ ದೋಷಗಳು ನುಸುಳಿಕೊಳ್ಳುತ್ತಲಿದ್ದವು. ದೀರ್ಘ ವಾಕ್ಯಗಳು ಓದಲು ಬೇಸರವನ್ನು ಹುಟ್ಟಿಸುತ್ತಿದ್ದವು. ತುರಮರಿ ಅವರ ಬಾಣ ಕಾದಂಬರಿಯ ಕನ್ನಡ ಅನುವಾದದ ಭಾಷಾ ಶೈಲಿಯು ಮುಂದಿನ ಲೇಖಕರಿಗೆ ಮಾದರಿಯಂತಾಯಿತು.

ತುರಮರಿಯವರು 'ಕಾದಂಬರಿ'ಯ ಜಟಿಲವಾದ ಕಥೆಯನ್ನು ಸರಳವಾಗಿ ಕನ್ನಡಕ್ಕೆ ತಂದರು. ಸಣ್ಣ ಸಣ್ಣ ವಾಕ್ಯಗಳಲ್ಲಿ ಅದರ ಸ್ವಾರಸ್ಯವನ್ನು ಹೆಚ್ಚಿಸಿದರು. ಪ್ರಾಸದ ಮೋಹಕ್ಕೆ ಕಟ್ಟುಬೀಳಲಿಲ್ಲ. ತುರಮರಿ ಅವರು ಕನ್ನಡದ ಸರಳ ಸೌಂದರ್ಯವನ್ನು ಮೆಚ್ಚಿಕೊಂಡವರು. ಅದನ್ನೇ ಪ್ರಯೋಗದಲ್ಲಿ ತಂದರು.

ಕಾದಂಬರಿಯ ದೀರ್ಘ ಸನ್ನಿವೇಶಗಳ ಸಣ್ಣ ಸಣ್ಣ ಅಂಶಗಳನ್ನು ಹೇಳಿ, ಅದು ನಮ್ಮ ಕಣ್ಣಿಗೆ ಕಟ್ಟುವಂತೆ ಮಾಡಿದರು. ಕಥೆಯ ರೋಚಕತೆಗೆ ಬಣ್ಣ ಬಳಿದರು.

ತುರಮರಿ ಅವರ ಹದವಾದ ಶೈಲಿ, ದಿನಬಳಕೆಯ ಮಾತುಗಳು, ಸುಲಭವಾದ ವಾಕ್ಯರಚನೆ ಇವು ಕನ್ನಡ ಗದ್ಯ ಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದವು.

ಗಂಗಾಧರ ಮಡಿವಾಳೇಶ್ವರ ತುರಮರಿ ಅವರ ಸಂಸ್ಕೃತ ಬಾಣಕವಿಯ ಕಾದಂಬರಿಯ ಕನ್ನಡ ಅನುವಾದವು ಕನ್ನಡ ಸಾಹಿತ್ಯಕ್ಕೆ ಶ್ರೇಷ್ಠ ಕೊಡುಗೆಯಾಗಿದೆ.

## ಗದ್ಯದ ಮಾದರಿ

ತುರಮರಿ ಅವರ ಬಾಣ ಕಾದಂಬರಿಯ ಕನ್ನಡ ಗದ್ಯ ಅನುವಾದದ ಒಂದು ಸುಂದರ ಮಾದರಿಯನ್ನು ಇಲ್ಲಿ ಕಾಣಬಹುದು :

"......ಒಂದು ದಿನ ಮುಂಜಾವಿನಲ್ಲಿ ಎಂಟೂ ದಿಕ್ಕುಗಳು ಸ್ವಚ್ಛವಾಗಿಯೂ ವಿಸ್ತೀರ್ಣವಾಗಿಯೂ ತೋರಹತ್ತಿದವು. ಎಳೆ ಬಿಸಿಲು ಬಿದ್ದುದರಿಂದ ಕಾನನದೊಳಗಿನ ಗಿಡಗಳ ಮೇಲಿನ ಹೂವುಗಳು ಚಂದವಾಗಿ ಕಾಣುತ್ತಿದ್ದವು. ಆ ಹೂವುಗಳ ಮೇಲೆಯೂ, ಕೊಳದೊಳಗಿನ ತಾವರೆಗಳ ಮೇಲೆಯೂ ತುಂಬಿಗಳೆರಗಿ ಝೇಂಕಾರ ಸ್ವರ ಮಾಡಹತ್ತಿದವು. ನವಿಲುಗಳೆದ್ದು ಆಡಲನುವಾದವು. ಸಿಂಹಗಳು ಆಕಳಿಸಹತ್ತಿದವು......ಇರುಳು ಅರಳಿದ ಹೂವುಗಳು ಮುಂಜಾವಿನ ಮಂಜಿನ ಹನಿಗಳ ಭಾರದಿಂದ ನೆಲಕ್ಕುದುರಿದವು. ಋಷಿಗಳ ತಪೋವನದೊಳಗಿನ ಹೋಮಧೂಮವು ಮೇಲಕ್ಕೆದ್ದಿತು. ಮಂಜಿನ ಹನಿಗೂಡಿ ತಂಪಾದಂಥ ತಾವರೆಗೊಳದ ಮೇಲೆ ಹಾದು ತಂಪಾದಂಥ ಮುಂಜಾವಿನ ಮಂದಮಾರುತವು ಸುಳಿಯಹತ್ತಿತು. ಪಕ್ಷಿಗಳು ಆನಂದದಿಂದ ಆಕಾಶದೊಳಗೆ ಹಾರತೊಡಗಿದವು......"

ಈ ಕನ್ನಡ ಬರವಣಿಗೆಯ ಶೈಲಿ ನೂರ ಆರೇಳು ವರ್ಷಗಳ ಹಿಂದಿನದು. ಆದರೂ ಈಗದು ನಿತ್ಯನೂತನವಾಗಿಯೇ ತೋರುತ್ತದೆ.

"ಸಂಸ್ಕೃತ ಕಾದಂಬರಿಯೊಳಗಿನ ಅತಿ ಮನೋಹರವಾದ ಕಥೆಯನ್ನು ನಮ್ಮ ದೇಶಭಾಂದವರ ಸಲುವಾಗಿ ಕನ್ನಡಿಸಿ, ಸ್ವಲ್ಪದರೊಳಗೆ ಬರೆದಿದ್ದೇವೆ. ಇದು ಮೂಲಗ್ರಂಥದ ಚತುರ್ಥಾಂಶವಾದೀತು..." ಎಂದು ತುರಮರಿ ಅವರು ಪುಸ್ತಕದ ಅರಿಕೆಯಲ್ಲಿ ಹೇಳಿಕೊಂಡಿದ್ದಾರೆ.

ತುರಮರಿಯವರ ಈ ಗದ್ಯ ಭಾಷಾ ಶೈಲಿ ಮುಂದೆ ಅನೇಕ ಕನ್ನಡ ಗದ್ಯ ಲೇಖಕರಿಗೆ ಮಾರ್ಗದರ್ಶಿಯಾಗಿದ್ದುದು ನಿಸ್ಸಂದೇಹ. ಪ್ರಾರಂಭದ ಕನ್ನಡ ಕಥೆ ಕಾದಂಬರಿಕಾರರು ಬಾಣ ಕಾದಂಬರಿಯ ಕನ್ನಡಾನುವಾದದ ಶೈಲಿಯನ್ನು ಅನುಸರಿಸಿ ತಮ್ಮ ಕೃತಿಗಳನ್ನು ರಚಿಸಿದರು. ಆಧುನಿಕ ಗದ್ಯ ನಿರ್ಮಾಪಕರಲ್ಲಿ ತುರಮರಿ ಅವರು ಗಣ್ಯರು.

ಕಳೆದ ಶತಮಾನದ ಹಾಗೂ ಸದಾಕಾಲ ನಿಲ್ಲಬಲ್ಲ ಕನ್ನಡದ ಶ್ರೇಷ್ಠ ಮೂಲ ಕೃತಿಗಳಿಗಿಂತ ತುರಮರಿ ಅವರ ಬಾಣ ಕಾದಂಬರಿಯು ಯಾವುದರಲ್ಲಿಯೂ ಕಡಿಮೆಯಿಲ್ಲ.

ಬಾಣ ಕಾದಂಬರಿಯ ಕನ್ನಡ ಅನುವಾದವು 1875ರಲ್ಲಿ ಬೆಳಗಾವಿಯಿಂದ ಹೊರಡುತ್ತಿದ್ದ 'ಕರ್ನಾಟಕ ಜ್ಞಾನಮಂಜರೀ' ಎಂಬ ಮಾಸ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. ಅದೇ ಕಾಲಕ್ಕೆ

ಶ್ರೀ.

# ಕರ್ನಾಟ ಜ್ಞಾನಮಂಜರೀ.

ಪುಸ್ತಕ ೧.] ಮಾಹೆ ಜುಲಾಯಿ ೧೮೭೫ [ಸಂಚಿಕೆ ೧೦.

## ಕಾದಂಬರಿ.

—000—

(೨೦೦ನೇ ಪುಟದಿಂದ ಮುಂದೆ)

ಕೆಲವು ಋಷಿಗಳು ಅನೇಕ ತರದ ಗ್ರಂಥಗಳನ್ನು ಓದುತ್ತ ಕೂತಿದ್ದರು. ಕೆಲವರು ಧರ್ಮಶಾಸ್ತ್ರಗಳನ್ನು ಪರಿಶೋಧಿಸುತ್ತಿರುವರು. ಹಲವರು ಹೊಸ ಪರ್ಣಶಾಲೆಗಳನ್ನು ಕಟ್ಟುತ್ತಿರುವರು. ಕೆಲವರು ಕಮಲಾಕ್ಷಮಾಲೆಗಳನ್ನು, ಕೆಲವರು ರುದ್ರಾಕ್ಷಮಾಲೆಗಳನ್ನು ಪೋಣಿಸುತ್ತಿರುವರು. ಕೆಲವರು ಕೃಷ್ಣಾಜಿನವನ್ನು ಹದಗೊಳಿಸಿ ಮಿದುವು ಮಾಡುತ್ತಿರುವರು. ಕೆಲವರು ನಾರಮಡಿಗಳನ್ನು ಒಗೆದು ಆರಹಾಕುತ್ತಿದ್ದರು. ಹಲವರು ದರ್ಭೆಯನ್ನು ತರುತ್ತಿದ್ದರು. ಕೆಲವರು ರಾಜಗಿರಿಯ ಕಾಳುಗಳನ್ನು ಕೂಡಹಾಕುತ್ತಿದ್ದರು ಹಲವರು ಅಂಗಳ ಸಾರಿಸುತ್ತಿದ್ದರು. ಕೆಲವರು ವೇದಶಾಸ್ತ್ರಗಳ ಅಧ್ಯಯನಅಧ್ಯಾಪನಗಳಲ್ಲಿ ತೊಡಗಿರುವರು. ಹಲವರು ಹಾಲಮಡ್ಡೀ ತಂದು ಧೂಪದ ಘಟ್ಟಿಗಳನ್ನು ಮಾಡುತ್ತಿದ್ದರು. ಕೆಲವರು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಯೋಗಾಭ್ಯಾಸ ಮೊದಲಾದ ಪರಲೋಕಸಾಧನೆಗಳನ್ನು ಮಾಡುತ್ತಿದ್ದರು. ಈ ಮೇರೆಗೆ ಆ ಆಶ್ರಮದಲ್ಲಿ ಋಷಿಗಳ ಉದ್ಯೋಗಗಳು ಸಾಗಿರುವವು. ಕಾಳು ಕಿಟ್ಟುಗಳೆಂಬುವು ಆ ತಪಸ್ವಿಗಳಿಗೆ ಗೊತ್ತು ಇದ್ದಿಲ್ಲ. ಆ ತಪೋವನದೊಳಗೆ ಹೊಗುವದಕ್ಕೆ ಕಾಮನಿಗೆ ಎದೆಯಾಗುತ್ತಿದ್ದಿಲ್ಲ. ಶಾಂತಸ್ವಭಾವದಿಂದಲೂ, ತಪದ ತೇಜದಿಂದಲೂ ಒಪ್ಪುವ ಯತೀಶ್ವರರಿದ್ದ ಆ ತಪೋವನವನ್ನು ನೋಡಿ ನಾನು ಕೃತಕೃತ್ಯನಾದೆನು.

ಆ ತಪೋವನದ ನಡುವೆ ಒಂದು ಅಶೋಕವೃಕ್ಷವದೆ. ಆ ವೃಕ್ಷದ ಎಲೆಗಳು ಅಲತಿಗೆಯ ರಸದೊಳಗೆ ಅದ್ದಿದಹಾಗೆ ಕೆಂಪುಬಣ್ಣದಿಂದೆ ಶೋಭಿಸುತ್ತಿರುವವು. ಆ ವೃಕ್ಷದ ಟೊಂಗೆಗಳಿಗೆ ಋಷಿಗಳು ತಮ್ಮ ಕೃಷ್ಣಾಜಿನಗಳನ್ನೂ ನೀರುತುಂಬಿ

'ಕರ್ನಾಟ ಜ್ಞಾನಮಂಜರಿ'—ಒಂದು ಪುಟ

ಸಾವಿರಾರು ವಾಚಕರ ಮನವನ್ನು ಸೂರೆಗೊಂಡಿತು. 1876ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಈಗ ಇದು 10 ಆವೃತ್ತಿಗಳನ್ನು ಕಂಡಿದೆ. ಈಗಲೂ ಕೂಡ ಇದರ ಜನಪ್ರಿಯತೆ ಮಾಸಿಲ್ಲ.

## ಕನ್ನಡ ಪಠ್ಯಪುಸ್ತಕ ರಚನೆ

ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಕನ್ನಡ ಭಾಷಾಂತರ ಕಚೇರಿಗೆ ವರ್ಗವಾಗಿ ಬಂದ ಬಳಿಕ ಮುಂಬಯಿ ವಿದ್ಯಾ ಇಲಾಖೆಗಾಗಿ ಕನ್ನಡ ಪಠ್ಯ ಪುಸ್ತಕಗಳನ್ನು ರಚಿಸಬೇಕಾಯಿತು. ಮೊದಲು ಮೂಲ ಕನ್ನಡದಲ್ಲಿ ಪಠ್ಯಗಳ ರಚನೆಯಾಗದೆ, ಮರಾಠಿಯ ಅನುವಾದಗಳೇ ಇರುತ್ತಿದ್ದವು. ವಿದ್ಯಾರ್ಥಿಗಳು ಮೂಲ ಕನ್ನಡ ಸಾಹಿತ್ಯದ ರುಚಿಗೆ ವಿಮುಖರಾಗಿ ಓದಬೇಕಾಗುತ್ತಿದ್ದಿತು.

ತುರಮರಿ ಅವರು ಸ್ವತಂತ್ರವಾಗಿ ಕನ್ನಡ ಪಠ್ಯ ಪುಸ್ತಕಗಳನ್ನು ರಚಿಸಿದರು. ಕೆಲವು ಪುಸ್ತಕಗಳನ್ನು ಮರಾಠಿಯಿಂದ ಅನುವಾದ ಮಾಡ ಬೇಕಾಗಿ ಬಂದಿತು. ಆದರೂ ಅವು ಕನ್ನಡದ ಗಂಧವನ್ನೇ ತುಂಬಿಕೊಂಡಿರು ತ್ತಿದ್ದವು.

1870ರಲ್ಲಿ ಪ್ರಕಟವಾದ ಕನ್ನಡ ಆರನೆಯ ಪಠ್ಯಪುಸ್ತಕವು ಮೇಜರ್ ಕ್ಯಾಂಡಿಯವರ ಮರಾಠಿಯ ಅನುವಾದವಾದರೂ, ಅದು ಮೂಲ ಕನ್ನಡ ವೆಂದೇ ಕಂಡುಬರುವಷ್ಟು ಸುಂದರವಾಗಿದೆ.

454 ಪುಟಗಳಿರುವ ಈ ಪುಸ್ತಕದಲ್ಲಿ 332 ಪುಟಗಳು ಗದ್ಯ, ಉಳಿದ ಪುಟಗಳು ಪದ್ಯಗಳಾಗಿವೆ. ಗದ್ಯ ಪಾಠಗಳು 66 ಇದ್ದು ವಿವಿಧ ವಿಷಯ ಗಳಿಗೆ ಸಂಬಂಧಿಸಿವೆ. ಇತಿಹಾಸ, ಭೂಗೋಲ, ಸಮಾಜಶಾಸ್ತ್ರ, ಗಣಿತ, ವಿಜ್ಞಾನ, ಜೀವಶಾಸ್ತ್ರ ಇಂಥ ವಿವಿಧ ವಿಷಯಗಳಿಗೆ ಆಗ ಬೇರೆ ಬೇರೆ ಪಠ್ಯಗಳಿಲ್ಲದೆ, ಒಂದೇ ಪುಸ್ತಕದಲ್ಲಿ ಎಲ್ಲವುಗಳನ್ನು ಸೇರಿಸಬೇಕಾಗುತ್ತಿತ್ತು. ಇಲ್ಲಿ ಎಲ್ಲ ಬಗೆಯ ಪಾಠಗಳಿವೆ.

ಸ್ವತಃ ಶಿಕ್ಷಕರಾಗಿದ್ದ ತುರಮರಿ ಅವರು ಅಂದಿನ ವಿದ್ಯಾರ್ಥಿಗಳ ಗುಣ ಮಟ್ಟವನ್ನು ಕಂಡುಕೊಂಡೇ ಈ ರೀತಿ ಕಾವ್ಯಗಳನ್ನು ಆಯ್ಕೆ ಮಾಡಿರಬೇಕು.

ಕನ್ನಡ 3,4,5, ಈ ಪಠ್ಯಪುಸ್ತಕಗಳನ್ನು ತುರಮರಿ ಅವರು ಸ್ವಂತ

ರಚಿಸಿದರು. 1,2 ಪುಸ್ತಕಗಳನ್ನು ಪರಿಷ್ಕರಿಸಿದರು. ಪಠ್ಯಪುಸ್ತಕಗಳಲ್ಲಿ ವಿವಿಧ ವಿಷಯುಗಳ ಜತೆ ಆದಷ್ಟು ಮಟ್ಟಿಗೆ ಕನ್ನಡ ಭಾಷಾ ಪರಿಶುದ್ಧತೆಯ ಬಗೆಗೆ ತುರಮರಿ ಅವರು ಗಮನವಿತ್ತರು. ಕರ್ನಾಟಕ ಸಂಸ್ಕೃತಿಯ ಪರಿಚಯ ವಾಗುವಂತೆ ಪಾಠಗಳನ್ನು ಆರಿಸಿ ತೆಗೆದಿದ್ದರು.

## ಇತರ ಕೃತಿಗಳು

### ಕವಿತಾ ಪದ್ಧತಿ

ವ್ಯಾಕರಣ ಶಾಸ್ತ್ರದಂತೆ ತುರಮರಿ ಅವರಿಗೆ ಛಂದಶ್ಯಾಸ್ತ್ರದಲ್ಲಿಯೂ ತುಂಬ ಪರಿಶ್ರಮವಿತ್ತು. ಕನ್ನಡಿಗರಲ್ಲಿ ಹಳಗನ್ನಡ ಕಾವ್ಯಗಳ ಬಗೆಗೆ ಪ್ರಜ್ಞೆ ಅಭಿರುಚಿ ಮೂಡಿಸುವ ಸಲುವಾಗಿ, ಅಧ್ಯಯನ ಹಾಗೂ ಕಾವ್ಯರಚನೆ ಮಾಡುವುದಕ್ಕಾಗಿ 'ಕವಿತಾ ಪದ್ಧತಿ' ಎಂಬ ಗ್ರಂಥವನ್ನು ರಚಿಸಿದರು. ಈ ಪುಸ್ತಕವು ಛಂದಶ್ಯಾಸ್ತ್ರವನ್ನು ವಿವರಿಸುತ್ತದೆ.

### ಕೈವಲ್ಯ ಪದ್ಧತಿ

ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಗೆ 1873ರಲ್ಲಿ ತುರಮರಿ ಅವರು ಟೀಕೆ ಬರೆದರು. ವೇದಾಂತ ಹಾಗೂ ತತ್ವಶಾಸ್ತ್ರಗಳಲ್ಲಿ ತುರಮರಿ ಅವರ ಅಭಿರುಚಿಯನ್ನು ಈ ವ್ಯಾಖ್ಯಾನವು ಹೇಳಿಕೊಡುತ್ತದೆ. ವೇದಾಂತ ಮತ್ತು ತತ್ತ್ವಶಾಸ್ತ್ರಗಳ ಆಳವಾದ ಪಾಂಡಿತ್ಯ ತುರಮರಿ ಅವರಲ್ಲಿ ಇತ್ತು. ಈ ಗ್ರಂಥವನ್ನು ಬೆಳಗಾವಿಯ 'ಬೆಳಗಾಂವ ಸಮಾಚಾರ' ಪತ್ರಿಕೆಯ ಒಡೆಯರು ಪ್ರಕಟಿಸಿದ್ದರು.

### ಭಾಷಾದರ್ಪಣ

ತುರಮರಿ ಅವರು ಕನ್ನಡ ಶಿಕ್ಷಕರಿಗೆ ಹಾಗೂ ಹಳಗನ್ನಡ ಸಾಹಿತ್ಯ ವನ್ನು ಅಧ್ಯಯನ ಮಾಡುವವರಿಗೆ ಅನುಕೂಲವಾಗುವಂತೆ ಕನ್ನಡ ವ್ಯಾಕರಣ ವನ್ನು ವಿವರಿಸುವ ಲೇಖನಗಳನ್ನು ಬರೆದರು. ಈ ಬರಹಗಳು 1874ರಿಂದ 1877ರವರೆಗೆ 'ಮಠಪತ್ರಿಕೆ'ಯಲ್ಲಿ ಪ್ರಕಟವಾದವು. ಇದು ತುರಮರಿ

ಅವರು ಬರೆದ ಸ್ವತಂತ್ರ ವ್ಯಾಕರಣ. ತುರಮರಿ ಅವರ ಅಕಾಲಿಕ ನಿಧನದಿಂದ ಈ ಲೇಖನವಶಾಲೆ ನಿಲ್ಲಬೇಕಾಗಿ ಬಂದಿತು. ಪುಸ್ತಕರೂಪದಲ್ಲಿ ಬರಲು ಸಾಧ್ಯವಾಗಲಿಲ್ಲ.

## ಶಬ್ದಮಣಿ ದರ್ಪಣದ ವ್ಯಾಖ್ಯಾನ

ಕೇಶಿರಾಜನ 'ಶಬ್ದಮಣಿ ದರ್ಪಣ'ವು ಕನ್ನಡ ವ್ಯಾಕರಣ ಶಾಸ್ತ್ರವನ್ನು ಪ್ರತಿಪಾದಿಸುವ ಪ್ರಮಾಣಬದ್ಧವಾದ, ಸುವ್ಯವಸ್ಥಿತವಾದ, ವಿಸ್ತಾರವಾದ ಅಮೂಲ್ಯವಾದ ಗ್ರಂಥ. ಈ ಗ್ರಂಥದ ಮಹತ್ತ್ವವನ್ನು ಅರಿತ ತುರಮರಿ ಅವರು 1866ರಿಂದ 1877ರವರೆಗೆ 'ಮಠಪತ್ರಿಕೆ'ಯಲ್ಲಿ ಧಾರಾವಾಹಿಯಾಗಿ ವ್ಯಾಖ್ಯಾನ ಬರೆಯುತ್ತಿದ್ದರು. ಹಳಗನ್ನಡ ಕಾವ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳವರಿಗೆ, ಕನ್ನಡ ಕಾವ್ಯವನ್ನು ಸಮರ್ಥವಾಗಿ ಕಲಿಸಬೇಕೆಂದಿರುವ ಶಿಕ್ಷಕರಿಗೆ ಉಪಯೋಗವಾಗುವಂತೆ ಸರಳವಾದ ರೀತಿಯಲ್ಲಿ ಟೀಕೆ ಬರೆದರು.

ಪ್ರಾರಂಭದ ಜೂನ್ 1866ರ ಮಠಪತ್ರಿಕೆಯಲ್ಲಿ ತುರಮರಿ ಅವರು ಪ್ರಸ್ತಾವನೆಯ ರೂಪದಲ್ಲಿ ಈ ರೀತಿ ಬರೆದಿದ್ದಾರೆ :

> "......ಕನ್ನಡದಲ್ಲಿ ಶಬ್ದಮಣಿ ದರ್ಪಣವೆಂಬುದೊಂದು ಅತ್ಯಮೂಲ್ಯವಾದ ವ್ಯಾಕರಣವುಂಟು. ಅದು ವಸ್ತುತಃ ಹಳಗನ್ನಡ ಭಾಷೆಯ ವ್ಯಾಕರಣವಾದಾಗ್ಯೂ ಈಗಿನ ಕನ್ನಡ ಭಾಷೆಯ ವ್ಯಾಕರಣಕ್ಕೆ ಮುಖ್ಯವಾದ ಆಶ್ರಯವಾಗಿರುತ್ತದೆ. ಈ ಕಾರಣದಿಂದಲೂ, ಹಳಗನ್ನಡದ ಜ್ಞಾನಕ್ಕೆ ಅದು ಅತ್ಯವಶ್ಯವಾಗಿರುವುದರಿಂದಲೂ ಅದನ್ನು ಛಾಪಿಸಿದರೆ ನಮ್ಮ ಮಾಸ್ತರ ಜನರಿಗೆ ಬಹು ಲಾಭ ಉಂಟಾಗುವದೆಂದು ನೋಡಿ, ಈ ಪತ್ರಿಕೆಯ ದ್ವಾರವಾಗಿ ಅದನ್ನು ಪ್ರಸಿದ್ಧಪಡಿಸುವ ಆಲೋಚನೆ ಮಾಡಿರುತ್ತೇನೆ......"

## ಪತ್ರಿಕಾ ಸಂಬಂಧ

'ಮಠಪತ್ರಿಕೆ' ಬೆಳಗಾವಿಯ ನಾರ್ಮಲ್ ಸ್ಕೂಲಿನಿಂದ ಪ್ರಕಟವಾಗುತ್ತಿದ್ದ ಕನ್ನಡ ಮಾಸಪತ್ರಿಕೆ. 'ಮಠ' ಪದವನ್ನು 'ಶಾಲೆ' ಎಂಬ ಅರ್ಥದಲ್ಲಿ



ಮಠಪತ್ರಿಕೆ 1865ರಲ್ಲಿ ಪ್ರಾರಂಭವಾಯಿತು

ಬಳಸಲಾಗಿತ್ತು. 'ಮಠಪತ್ರಿಕೆ' 1865ರಲ್ಲಿ ಪ್ರಾರಂಭವಾಯಿತು. ಅನಂತರ 'ಶಾಲಾಪತ್ರಿಕೆ' 'ಕನ್ನಡ ಶಾಲಾ ಪತ್ರಿಕೆ' ಎಂದು ಹೆಸರನ್ನು ಬದಲಾಯಿಸಿ

ಕೊಂಡಿತು. 1929ರಲ್ಲಿ 'ಕನ್ನಡ ಪ್ರಾಥಮಿಕ ಶಿಕ್ಷಣ' ಎಂದು, ಮತ್ತೆ 1956ರಲ್ಲಿ 'ಜೀವನ ಶಿಕ್ಷಣ' ಎಂದು ಪರಿವರ್ತಿತವಾಯಿತು.

1865ರಿಂದ ಈ ಪತ್ರಿಕೆ ಇಂದಿನವರೆಗೂ ಪ್ರಕಟವಾಗುತ್ತಲಿದೆ. ಅಂದಿನಿಂದ ಇಂದಿನವರೆಗೆ ಸತತವಾಗಿ 118 ವರ್ಷಗಳವರೆಗೆ ನಡೆದುಬಂದ ಕನ್ನಡ ನಿಯತಕಾಲಿಕ ದೇಶದಲ್ಲಿ ಇದೊಂದೇ ಆಗಿದೆ. ಶತಮಾನೋತ್ಸವ ಆಚರಿಸಿದ ಕನ್ನಡದ ಪ್ರಪ್ರಥಮ ಪತ್ರಿಕೆಯಿದು.

ಈ ಪತ್ರಿಕೆಯನ್ನು ಬಾಲ್ಯದಲ್ಲಿ ಪೋಷಣೆ ಮಾಡಿ, ಬೆಳೆಸಿದ ಕೀರ್ತಿ ಗಂಗಾಧರ ಮಡಿವಾಳೇಶ್ವರ ತುರಮರಿ ಅವರಿಗೆ ಸಲ್ಲುತ್ತದೆ. 1865ರಿಂದ 1877ರ ತಮ್ಮ ಅವಸಾನ ಕಾಲದವರೆಗೂ ಈ ಪತ್ರಿಕೆಯಲ್ಲಿ ತುರಮರಿ ಅವರು ಬರೆಯುತ್ತಲೇ ಇದ್ದರು. ಅವರ ಬಹಳಷ್ಟು ಸಾಹಿತ್ಯ ಕೃತಿಗಳು ಒಂದಲ್ಲ ಒಂದು ರೀತಿ ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

'ಮಠಪತ್ರಿಕೆ'ಯಲ್ಲಿ ವಿಷಯಗಳನ್ನು ತುಂಬುವ ಜತೆ, ಈ ಪತ್ರಿಕೆಯ ಸಂಪಾದಕರಾಗಿಯೂ ತುರಮರಿ ಅವರು ಸೇವೆ ಸಲ್ಲಿಸಿದ್ದಾರೆ. ಈ ಪತ್ರಿಕೆಗೆ ಸಾಹಿತ್ಯಿಕ ವಿಷಯಗಳಲ್ಲಿ ಪ್ರೌಢಿಮೆಯನ್ನು ತಂದುಕೊಟ್ಟಿದ್ದಾರೆ.

ಪ್ರಾರಂಭದಲ್ಲಿ ಈ ಪತ್ರಿಕೆಯನ್ನು ಪ್ರಕಟಿಸುವುದು ಸುಲಭದ ಸಂಗತಿಯಾಗಿರಲಿಲ್ಲ. ಆ ಸಮಯ ಬೆಳಗಾವಿಯಲ್ಲಿ ಮುದ್ರಣದ ಸೌಕರ್ಯವಿರಲಿಲ್ಲ. ಮಠಪತ್ರಿಕೆಯನ್ನು ಕೈಬರಹದ ಕಲ್ಲಚ್ಚಿನ ಪ್ರತಿ ತೆಗೆದು ಮುದ್ರಿಸುತ್ತಿದ್ದರು. ಓದುಗರ ಸಂಖ್ಯೆ ತೀರ ಪರಿಮಿತ. ಕನ್ನಡ ಶಾಲಾ ಶಿಕ್ಷಕರಷ್ಟೇ ಓದಬೇಕು. ಆರ್ಥಿಕ ಸಂಕಟ ತುಂಬಾ ಇತ್ತು. ಯೋಗ್ಯ ಲೇಖಕರ ಕೊರತೆಯೂ ಸಾಕಷ್ಟು. ಇಂಥ ಕಠಿಣ ಪ್ರಸಂಗದಲ್ಲಿ ಈ ಪತ್ರಿಕೆ ಶತಮಾನಗಳಷ್ಟು ಬದುಕುವಂತೆ ಜೀವ ತುಂಬಿದ ಶ್ರೇಯಸ್ಸು ಡೆಪ್ಯುಟಿ ಚೆನ್ನಬಸಪ್ಪ ಹಾಗೂ ಗಂಗಾಧರ ಮಡಿವಾಳೇಶ್ವರ ತುರಮರಿ ಅವರಿಗೆ ಸಲ್ಲುತ್ತದೆ.

ಮಠಪತ್ರಿಕೆಗೆ ನಿಜವಾಗಿ ಲೇಖನ ಬರೆದು ಪ್ರಾಣ ತುಂಬಿದವರೇ ತುರಮರಿಯವರು.

ಮಠಪತ್ರಿಕೆಯ ಸಂಬಂಧ ತುರಮರಿ ಅವರಿಗೆ ಬಹಳ ಹೆಚ್ಚಾಗಿತ್ತು. ಇದಲ್ಲದೆ ತುರಮರಿ ಅವರು 'ಕರ್ನಾಟಕ ಜ್ಞಾನಮಂಜರೀ' 'ರಸಿಕ ರಂಜನಿ' ಮತ್ತು ಇತರ ಕನ್ನಡ ಪತ್ರಿಕೆಗಳ ಪ್ರಮುಖ ಲೇಖಕರೂ ಆಗಿದ್ದರು.

## ವಿರಾಮವಿಲ್ಲದ ಪರಿಶ್ರಮ

· ಬೆಳಗಾವಿಯ ಕನ್ನಡ ಭಾಷಾಂತರ ಕಚೇರಿಯಲ್ಲಿಯೇ ತುರಮರಿ ಅವರು ಹೆಚ್ಚಿನ ಸೇವೆ ಸಲ್ಲಿಸಿದರು. ನಾರ್ಮಲ್ ಸ್ಕೂಲಿನಲ್ಲಿ ಕೆಲವು ದಿನ ವೈಸ್ ಪ್ರಿನ್ಸಿಪಾಲ್ ಎಂದೂ ಕೆಲಸ ಮಾಡಿದರು. ಈ ಟ್ರೇನಿಂಗ್ ಕಾಲೇಜು 1875 ಜೂನ್ 1ನೆಯ ತಾರೀಖಿಗೆ ಬೆಳಗಾವಿಯಿಂದ ಧಾರವಾಡಕ್ಕೆ ಸ್ಥಳಾಂತರವಾಯಿತು. ಅದರಂತೆ ಇದಕ್ಕೆ ಹೊಂದಿಕೊಂಡ ಕನ್ನಡ ಭಾಷಾಂತರ ಕಚೇರಿ ಕೂಡ ಧಾರವಾಡಕ್ಕೆ ಹೋಗಬೇಕಾಯಿತು.

ಆ ಸಮಯ ತುರಮರಿ ಅವರು ಬೆಳಗಾವಿಯಲ್ಲಿಯೇ ಉಳಿದರು. ಅಲ್ಲಿಯೇ ಭಾಷಾಂತರ ಕೆಲಸವನ್ನು ನೋಡಿಕೊಂಡರು. ಅದಾಗಲೇ ಬೆಳಗಾವಿಯಲ್ಲಿ ಸರದಾರ್ ಹೈಸ್ಕೂಲು ಆರಂಭವಾಗಿತ್ತು. ಈ ಹೈಸ್ಕೂಲಿನಲ್ಲಿ ತುರಮರಿ ಅವರು ಕನ್ನಡವನ್ನು ಹೇಳಿಕೊಡುತ್ತಿದ್ದರು. ಇದರಿಂದ ಇವರಿಗೆ ಶಿಕ್ಷಣ ಖಾತೆಯಿಂದ 30 ರೂಪಾಯಿ ಹೆಚ್ಚಿಗೆ ಸಂಬಳ ದೊರೆಯುತ್ತಿತ್ತು.

ಕ್ರಿ.ಶ. 1866ರಿಂದ 1877ರವರೆಗೆ ಈ 11 ವರ್ಷಗಳ ತನಕ ತುರಮರಿಯವರು ಅವ್ಯಾಹತವಾಗಿ ತಮ್ಮ ಅಧ್ಯಾಪನ, ಅನುವಾದ ಕಾರ್ಯಗಳ ಜತೆಯಲ್ಲಿಯೇ ಕನ್ನಡ ಸಾಹಿತ್ಯವನ್ನು ನಿರ್ಮಿಸಿದರು. ಇನ್ನುಳಿದ ಸಮಾಜದ ಕೆಲಸಗಳನ್ನೂ ನಿರ್ವಹಿಸಿದರು.

ಹಳಗನ್ನಡ ಸಾಹಿತ್ಯ ಸಂಶೋಧಿಸಿ ಪ್ರಕಟಿಸಿದ್ದು ಗಂಗಾಧರ ಮಡಿವಾಳೇಶ್ವರ ತುರಮರಿ ಅವರ ಹೆಮ್ಮೆಯ ಸಾಧನೆ. ಹಳಗನ್ನಡದ ಮೂಲ ಹಸ್ತ ಪ್ರತಿಗಳನ್ನೇ ಅವರು ಅಧ್ಯಯನ ಮಾಡಬೇಕಾಯಿತು. ಅದರಂತೆ ಸಂಶೋಧಿಸಬೇಕಾಯಿತು.

ಹೆಚ್ಚಿನ ಬೇರೆ ಸಾಧನೆ, ಸಂಪತ್ತುಗಳಿಲ್ಲದ ಸಾಮಾನ್ಯ ವ್ಯಕ್ತಿ ತುರಮರಿಯವರು. ಒಬ್ಬೊಂಟಿಗರಾಗಿ 'ಶಬ್ದಮಂಜರಿ'ಯಂಥ ಮಹಾಕೋಶವನ್ನು ರಚಿಸಿದ್ದು, ಅದಕ್ಕೆ ಬೇಕಾದ ಶ್ರಮ, ಸಾಧನೆ, ಸಮಯ, ಸಾಹಸಗಳನ್ನು ಭಾವಿಸಿಯೇ ಅರಿಯಬೇಕು.

ಕಬ್ಬಿಣದ ಕಡಲೆಯಾಗಿದ್ದ, ಹಳಗನ್ನಡ ಕಾವ್ಯಗಳನ್ನು ಸರಳವಾಗಿ ಅರ್ಥಮಾಡಿ ವ್ಯಾಖ್ಯಾನ ಬರೆದರು. ಸಂಸ್ಕೃತವನ್ನೂ ಕನ್ನಡದಲ್ಲಿ ಅನುವಾದಿಸಿದರು. ಕನ್ನಡ ಬೋಧಕರಿಗೆ ಸಾಹಿತ್ಯಾಭ್ಯಾಸಿಗಳಿಗೆ ಮಾರ್ಗದರ್ಶಿಗಳಾದರು.

ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಒಟ್ಟಿಗೆ 30 ವರ್ಷಗಳ ಕಾಲ ಶಿಕ್ಷಣಕ್ಷೇತ್ರದಲ್ಲಿ ಸೇವೆ ಸಲ್ಲಿಸಿದರು. ಇವರು ಜೀವನದ ಸಂಬಳಕ್ಕಾಗಿ ನೌಕರಿ ಮಾಡಿದವರಲ್ಲ. ಕನ್ನಡದ ಮೇಲಿನ ಕಳಕಳಿಯಿಂದ ಹಗಲು ರಾತ್ರಿ ಶ್ರಮಪಟ್ಟವರು. ತುರಮರಿ ಅವರು ಸವೆಯಿಸಿದ ದಾರಿ ದೀರ್ಘವಾದುದು.

ಪ್ರಾರಂಭದಲ್ಲಿ 'ಗಾವಠೀ' ಶಾಲೆಯ ಶಿಕ್ಷಕರಾಗಿ, ಅನಂತರ ಸರಕಾರಿ ಶಾಲೆಯ ಮುಖ್ಯೋಪಾಧ್ಯಾಯರಾಗಿ, ಟ್ರೇನಿಂಗ್ ಸ್ಕೂಲಿನ ಅಧ್ಯಾಪಕರಾಗಿ, ಅದೇ ಸ್ಕೂಲಿನ ಉಪ ಪ್ರಾಚಾರ್ಯರಾಗಿ ಕೊನೆಗೆ ಪ್ರೌಢಶಾಲೆಯ ಕನ್ನಡ ಪಂಡಿತರಾಗಿ ಕನ್ನಡವನ್ನು, ಇತರ ವಿಷಯಗಳನ್ನು ಬೋಧಿಸಿದರು. ಭಾಷಾಂತರಕಾರರಾಗಿ ಹಾಗೂ ಪಠ್ಯಪುಸ್ತಕಗಳ ನಿರ್ಮಾಪಕರಾಗಿ ದುಡಿದರು. ತುರಮರಿ ಅವರು ಬಿಡುವಿನ ವೇಳೆಯಲ್ಲಿ ಸಾಹಿತ್ಯಸೇವೆ ಮಾಡಿದ್ದು ಬೇರೆ.

## ಫ್ಲೀಟರಿಗೆ ಸಹಾಯಹಸ್ತ

ಜಾನ್ ಎಫ್. ಫ್ಲೀಟ್ ಅವರು ಶಾಸನ ಸಂಶೋಧಕರೆಂದು ಪ್ರಖ್ಯಾತರಾಗಿಹೋಗಿದ್ದಾರೆ. ಐ.ಸಿ.ಎಸ್. ಪರೀಕ್ಷೆ ಪಾಸಾದ ಫ್ಲೀಟ್ ಅವರು ಭಾರತೀಯ ಸಾಹಿತ್ಯ ಹಾಗೂ ಸಂಸ್ಕೃತಿಗಳಲ್ಲಿ ತುಂಬ ಅಭಿರುಚಿಯುಳ್ಳವರು. ಇವರು 1872ರಲ್ಲಿ ಮುಂಬಯಿ ಪ್ರಾಂತ್ಯದ ದಕ್ಷಿಣ ವಿಭಾಗದ ಶಿಕ್ಷಣಾಧಿಕಾರಿಗಳಾಗಿ ಬೆಳಗಾವಿಗೆ ಬಂದರು. ಮುಂದೆ ಮೂರು ವರ್ಷಗಳವರೆಗೆ ಫ್ಲೀಟ್ ಅವರು ಬೆಳಗಾವಿಯಲ್ಲಿದ್ದರು.

ಬೆಳಗಾವಿಗೆ ಬಂದ ಫ್ಲೀಟರು ಕನ್ನಡನಾಡಿನ ಇತಿಹಾಸ ಕುರಿತ ಶಾಸನಗಳನ್ನು ಹಾಗೂ ಜಾನಪದ ಹಾಡು, ಲಾವಣಿಗಳನ್ನು ಸಂಶೋಧಿಸತೊಡಗಿದರು. ಕನ್ನಡವನ್ನು ಕಲಿತಿದ್ದರು. ಕನ್ನಡ ಭಾಷೆಯ ಬಗೆಗೆ ಫ್ಲೀಟರಿಗೆ ತುಂಬ ಅಭಿಮಾನ. ಎಲ್ಲ ಭಾರತೀಯ ಭಾಷೆಗಳಲ್ಲಿ ಕನ್ನಡಭಾಷೆಯು ಮಧುರವಾದುದೆಂದು ಫ್ಲೀಟರ ಅಭಿಪ್ರಾಯ.

ಫ್ಲೀಟರು ಬೆಳಗಾವಿಯಲ್ಲಿದ್ದಾಗ, ಶಾಸನಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಅವರಿಗೆ ತುರಮರಿ ಅವರು ಸಹಾಯ ಮಾಡುತ್ತಲಿದ್ದರು.



ಫ್ಲೀಟರಿಗೆ ತುರಮರಿ ಅವರು ಸಹಾಯ ಮಾಡುತ್ತಿದ್ದರು

## ಕನ್ನಡ ಭಾಷಾಪೋಷಕ

ಗಂಗಾಧರ ಮಡಿವಾಳೇಶ್ವರ ತುರಮರಿ ಅವರ ಶಿಷ್ಯ ಬಳಗ ಅಪಾರ. ಪ್ರಾಥಮಿಕ ಶಾಲೆ, ಟ್ರೇನಿಂಗ್ ಸ್ಕೂಲ್ ಹಾಗೂ ಪ್ರೌಢ ಶಾಲೆಗಳಲ್ಲಿ ಸಾವಿರಾರು ಜನ ಶಿಷ್ಯರು ಇವರ ಕೈಯಲ್ಲಿ ಕನ್ನಡ ಕಲಿತು, ಕನ್ನಡದ

ಬೆಳವಣಿಗೆಗೆ ಶ್ರಮಿಸಿದರು. ತುರಮರಿ ಅವರು ಕನ್ನಡಕ್ಕಾಗಿ ಹಗಲಿರುಳು ಅವಿಶ್ರಾಂತವಾಗಿ ದುಡಿದವರು.

ಪ್ರಾರಂಭದಲ್ಲಿ ತುರಮರಿ ಅವರು ತಮ್ಮ ಊರಾದ ಬೈಲುಹೊಂಗಲ ದಲ್ಲಿಯ ಮರಾಠಿ ಪ್ರಭಾವವನ್ನು ಅಳಿಸಿ, ಅಲ್ಲಿನ ವಿದ್ಯಾರ್ಥಿಗಳು ಕನ್ನಡ ಕಲಿಯುವಂತೆ ಶ್ರಮಿಸಿದರು. ಆ ಸಮಯ ಉತ್ತರ ಕರ್ನಾಟಕದ ಕೋರ್ಟು, ಕಚೇರಿ, ವ್ಯಾಪಾರಿ ಭಾಷೆ ಹೆಚ್ಚಾಗಿ ಮರಾಠಿಯೇ ಆಗಿತ್ತು. ಪಾಲಕರು ತಮ್ಮ ಮಕ್ಕಳಿಗೆ ಮರಾಠಿ ಭಾಷೆ ಹಾಗೂ ಮೋಡಿ ಲಿಪಿಗಳ ಪರಿಚಯುವನ್ನು ಮಾಡಿಕೊಡಲು ಇಚ್ಚಿಸುತ್ತಿದ್ದರು. ಇದು ತುರಮರಿ ಅವರಿಗೆ ಸರಿಕಂಡಿರ ಲಿಲ್ಲ.

ತುರಮರಿ ಅವರು ಬೈಲುಹೊಂಗಲದಂತೆ ಮುಂದೆ ಬಂಕಾಪುರ ಮತ್ತು ಹುನುಗುಂದಗಳಲ್ಲಿ ಕೂಡ ಕನ್ನಡದಲ್ಲಿಯೇ ವ್ಯವಹಾರ ಬೆಳೆಯುವಂತೆ ನೋಡಿಕೊಂಡರು.

ಆಗಿನ ಉತ್ತರ ಕರ್ನಾಟಕದ ಭಾಗಕ್ಕೆ 'ದಕ್ಷಿಣ ಮರಾಠಾ' ಎಂದೇ ಕರೆಯುವ ರೂಢಿಯಾಗಿತ್ತು. ಕನ್ನಡಿಗರೇ ಎಸ್.ಎಂ.ಸಿ. (ಸದರ್ನ್ ಮರಾಠಾ ಸೆಂಟರ್) ಎಂದು ಬರೆದುಕೊಳ್ಳುತ್ತಲಿದ್ದರು. ಮರಾಠಿ ಶಾಲೆಗಳ ಪ್ರಾಬಲ್ಯವಂತೂ ಇದ್ದೇ ಇದ್ದಿತು. ಕನ್ನಡ ಶಿಕ್ಷಕರು ಕೂಡ ಮರಾಠಿಯಲ್ಲಿ ಪತ್ರ ವ್ಯವಹಾರ ಮಾಡುವುದು, ಮರಾಠಿಯಲ್ಲಿ ವೇಳಾಪತ್ರಿಕೆ ಬರೆಯುವುದು, ಮರಾಠಿಯಲ್ಲಿಯೇ ರುಜು ಮಾಡುವುದು, ಇವು ಗೌರವದ ಸಂಗತಿಯೆಂದು ತಿಳಿದಿದ್ದರು.

ಅದೆಷ್ಟೋ ಜನ ಕನ್ನಡ ಶಿಕ್ಷಕರಿಗೆ, ಕನ್ನಡದಲ್ಲಿ ಅಪಾರವಾದ ಹಳಗನ್ನಡ ಸಾಹಿತ್ಯ ಇದೆ ಎಂಬುದೇ ತಿಳಿದಿರಲಿಲ್ಲ. ಕಣ್ಣು ಮುಚ್ಚಿಕೊಂಡು ಕೆಲಸ ಮಾಡುವುದೇ ಧನ್ಯತೆಯೆಂದು ಅವರು ತಿಳಿದಿದ್ದರೇನೋ !

ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಈ ದೋಷಗಳನ್ನೆಲ್ಲ ನಿವಾರಿಸಲು ಕಂಕಣಬದ್ಧರಾದರು. ಇವರಿಗೆ ರಸೆಲ್, ಡೆಪ್ಯುಟಿ ಚೆನ್ನಬಸಪ್ಪ ಇಂಥ ಮಹಾನುಭಾವರ ಸಹಕಾರ ಇದ್ದೇ ಇದ್ದಿತು. ಕನ್ನಡ ಶಾಲೆಗಳ ಬೆಳವಣಿಗೆ, ವ್ಯವಹಾರದಲ್ಲಿ ಹೆಚ್ಚಾಗಿ ಕನ್ನಡದ ಬಳಕೆ ಇವುಗಳ ಬಗೆಗೆ ಗಮನ ಕೊಟ್ಟರು. ಇದಲ್ಲದೆ ಶಿಕ್ಷಕರ ಕನ್ನಡೀಕರಣ, ಭಾಷಾ ಶುದ್ಧಿಗೆ ಗಮನ, ಹಳಗನ್ನಡ ಸಾಹಿತ್ಯದ ಬಗೆಗೆ ಆಸಕ್ತಿ ನಿರ್ಮಾಣ ಈ ಕಾರ್ಯಗಳನ್ನೂ ನಿರ್ವಹಿಸಿದರು. ಯೋಗ್ಯ, ಉಪಯುಕ್ತ ಪುಸ್ತಕಗಳನ್ನು ಸಿದ್ಧಪಡಿಸಿ, ಆ

ಕ್ಷೇತ್ರದ ಅಭಾವ ನೀಗಿದರು. ಹೀಗಾಗಿ ತುರಮರಿ ಅವರು ಅನೇಕ ಮುಖ ದಿಂದ ದುಡಿದರು.

1856 ಸಮಯ ಉತ್ತರ ಕರ್ನಾಟಕದಲ್ಲಿ ಒಟ್ಟಿಗೆ 34 ಕನ್ನಡ ಪ್ರಾಥಮಿಕ ಶಾಲೆಗಳಿದ್ದವು. 1865ರಲ್ಲಿ ರಸೆಲ್, ಡೆಪ್ಯುಟಿ ಚೆನ್ನಬಸಪ್ಪ, ತುರಮರಿ ಅವರ ಪರಿಶ್ರಮದಿಂದ 180 ಶಾಲೆಗಳಾದವು. 1866ರಲ್ಲಿ ಮತ್ತೆ 71 ಕನ್ನಡ ಶಾಲೆಗಳು ಅಧಿಕಗೊಂಡವು. ವಿದ್ಯಾರ್ಥಿಗಳ ಸಂಖ್ಯೆ ಏರಿದಂತೆ ಶಿಕ್ಷಕರ ಸಂಖ್ಯೆಯೂ ಏರಬೇಕಾಯಿತು. ಬೋಧನೆಯ ಕಾರ್ಯ ಹೆಚ್ಚಾದಂತೆ ತುರಮರಿ ಅವರಿಗೆ ಕನ್ನಡ ಪಠ್ಯ ನಿರ್ಮಿಸುವ ಹೊಣೆಯೂ ಹೆಚ್ಚಾಯಿತು.

## ಮುಕ್ತಾಯಕ್ಕೆ ಮುನ್ನ

ಗಂಗಾಧರ ಮಡಿವಾಳೇಶ್ವರ ತುರಮರಿ ಅವರಿಗೆ ಇಬ್ಬರು ಹೆಂಡತಿಯ ರಿದ್ದರೂ ಹುಟ್ಟಿದ ಮಕ್ಕಳು ಬದುಕಲಿಲ್ಲ. ಮತ್ತೆ ಬೇರೆ ಮಕ್ಕಳಾಗಲಿಲ್ಲ. ಮೊದಲನೆಯ ಗಂಡುಮಗು ಬಾಲ್ಯದಲ್ಲಿಯೇ ಮೈಲಿ ಬೇನೆಯಿಂದ ತೀರಿ ಕೊಂಡಿತ್ತು. ಚಿಕ್ಕ ತಮ್ಮ ಸಿದ್ಧಲಿಂಗಪ್ಪನಿಗೆ ಜಂಗಮ ದೀಕ್ಷೆ ಕೊಡಿಸಿ ಆತ ನನ್ನು ದತ್ತುಪುತ್ರನನ್ನಾಗಿ ಸ್ವೀಕರಿಸಿದರು. ಮುಂದೆ ಸಿದ್ಧಲಿಂಗಪ್ಪ ಅವರಿಂದಲೂ ಸಂತತಿ ಬೆಳೆಯಲಿಲ್ಲ.

ಪ್ರಾರಂಭದಲ್ಲಿ ತುರಮರಿ ಅವರು ತಮ್ಮ ಹೆಸರನ್ನು 'ಗಂಗಾಧರ ಮಡಿವಾಳೇಶ್ವರ ತುರಮರಿ' ಎಂದು ಬಳಸಿದರು. 'ತುರಮರಿ' ಎಂಬ ಮನೆತನದ ಹೆಸರನ್ನು 'ತುರಮರಿ' ಎಂದೇ ಕರೆದುಕೊಂಡಿದ್ದಾರೆ. ಹಿರಿಯರು ಇಟ್ಟ ಹೆಸರು 'ಗಂಗಪ್ಪ'. ದತ್ತು ಸ್ವೀಕರಿಸಿದ ಗುರುಗಳು 'ಗಂಗಾಧರ' ಎಂದು ಕರೆದರು. ಜನತೆ ಇವರನ್ನು 'ಗಂಗಾಧರಯ್ಯ' ಮತ್ತು 'ಗಂಗಾ ಧರಪ್ಪಯ್ಯ ಎಂದು ಕರೆಯಿತು. ಪತ್ರ ವ್ಯವಹಾರಗಳಲ್ಲಿ ತುರಮರಿ ಅವರು 'ಗಂಗಾಧರ ಮಡಿವಾಳೇಶ್ವರ' ಎಂದಿಷ್ಟೇ ರುಜು ಹಾಕುತ್ತಿದ್ದರು. ಬಹಳಷ್ಟು ಕಡೆಗೆ 'ಗಂಗಾಧರ ಮಡಿವಾಳೇಶ್ವರ' ಎಂದೇ ಕರೆದುಕೊಂಡಿದ್ದಾರೆ.

ಇವರ ಮನೆತನಕ್ಕೆ 'ತುರಮರಿ' ಎಂದು ಹೆಸರು ಬರಲು ಕಾರಣ

ವೆಂದರೆ, ಈ ಮನೆತನದ ಮೂಲ ಪುರುಷರು ಬೈಲುಹೊಂಗಲಕ್ಕೆ ಹತ್ತಿರ ವಿರುವ 'ತುರಮರಿ' ಗ್ರಾಮದವರು. ಅನಂತರ ಅವರು ಉಪಜೀವನಕ್ಕಾಗಿ ಸ್ವಗ್ರಾಮ ತುರಮರಿಯನ್ನು ಬಿಟ್ಟು ಬೈಲುಹೊಂಗಲಕ್ಕೆ ಇರಲು ಬಂದರು. ಮೊದಲಿನ ಊರ ಹೆಸರು ಮನೆತನದ ಹೆಸರಾಗಿ ಉಳಿಯಿತು. ಈ ರೀತಿಯ ರೂಢಿ ಉತ್ತರ ಕರ್ನಾಟಕದಲ್ಲಿ ಈಗಲೂ ಇದೆ. ಬೇರೆ ಊರಿಗೆ ವಾಸಿಸಲು ಬಂದರೆ, ಮೂಲ ಊರಿನ ಹೆಸರಿನಿಂದಲೇ ಆ ಮನೆತನವನ್ನು ಕರೆಯುತ್ತಾರೆ. ಬೆಳಗಾವಿ ಸರದಾರ್ ಹೈಸ್ಕೂಲಿನಿಂದ 1875ರಲ್ಲಿ ಧಾರವಾಡಕ್ಕೆ ಸ್ಥಳಾಂತರ ವಾದ ಭಾಷಾಂತರ ಕಚೇರಿಗೆ ಬಂದರು. ಇಲ್ಲಿಗೆ ಬಂದ ಬಳಿಕ ಕನ್ನಡದ ಶ್ರೇಷ್ಠ ಕೃತಿಯೆಂದು ಗಣನೆಗೆ ಬಂದ 'ಬಾಣ ಕಾದಂಬರಿ'ಯ ಅನುವಾದ ಪುಸ್ತಕ ರೂಪದಲ್ಲಿ ಹೊರ ಬಂದಿತು.

ತುರಮರಿ ಅವರು ಧಾರವಾಡದಲ್ಲಿದ್ದಾಗ, ಸಾಹಿತ್ಯ ಸೇವೆಯ ಬಗೆಗೆ ಇನ್ನೂ ಅನೇಕ ಯೋಜನೆಗಳನ್ನು ಹಾಕಿಕೊಂಡಿದ್ದರು. ಆದರೆ ಆಕಸ್ಮಿಕವಾಗಿ ಧಾರವಾಡದಲ್ಲಿಯೇ ದಿ. 5–10–1877ನೆಯ ಇಸವಿಯಲ್ಲಿ ತಮ್ಮ 50ನೆಯ ವಯಸ್ಸಿನಲ್ಲಿ ತೀರಿಕೊಂಡರು.

ಇದು ತುರಮರಿಯವರದು ಮಧ್ಯ ವಯಸ್ಸು. ಈ ವಯಸ್ಸಿನ ಸಾವು ಕನ್ನಡಕ್ಕೆ ಒಂದು ಬಹು ದೊಡ್ಡ ಹಾನಿ. ಇನ್ನೂ ಅನೇಕ ಬಗೆಯಾಗಿ ತುರಮರಿ ಅವರು ಕನ್ನಡದ ಕೆಲಸವನ್ನು ಮಾಡಬಹುದಿತ್ತು. ಇವರ ಭವಿಷ್ಯತ್ತಿನ ಯೋಜನೆಗಳೆಲ್ಲ ನಿಂತುಹೋದವು.

ತಮ್ಮ ಕನ್ನಡ ಭಾಷಾ ಸೇವೆಯಿಂದ ಹಾಗೂ ಕೆಲವೇ ಕೃತಿಗಳಿಂದ ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಅಮರರಾದರು.

ಆಧುನಿಕ ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ಅನುಭಾವಿ ದಿ. ಮಧುರಚೆನ್ನರು ಒಮ್ಮೆ ಬೈಲುಹೊಂಗಲಕ್ಕೆ ಹೋದಾಗ, ತುರಮರಿ ಅವರ ಮನೆಗೆ ಹೋಗಿದ್ದರು. ಅವರ ಅಧ್ಯಯನದ ಮೇಜನ್ನು ಕಂಡು ದೀರ್ಘದಂಡ ನಮಸ್ಕಾರ ಹಾಕಿದರಂತೆ.

## ಅನುಬಂಧ-1

ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಮಹಾವಿದ್ವಾಂಸರಾಗಿದ್ದಂತೆ ಉತ್ತಮ ದರ್ಜೆಯ ಶಿಕ್ಷಕರೂ ಆಗಿದ್ದರು. ಅವರು ಸೇವೆ ಸಲ್ಲಿಸಿದ ಬಂಕಾಪುರ ಮತ್ತು ಹುನಗುಂದ ಶಾಲೆಗಳು ಪ್ರಗತಿಗೆ ಬಂದವು. ಈ ಮಾತಿಗೆ ಆಧಾರವಾಗಿ ಬಂಕಾಪುರದ ನಾಗರಿಕರೊಬ್ಬರು ದಿ. 8-7-1875ರ 'ಮಠಪತ್ರಿಕೆ'ಯಲ್ಲಿ ಈ ರೀತಿ ಒಂದು ಪತ್ರವನ್ನು ಬರೆದಿದ್ದಾರೆ :

"...ಸೇವಕರು ಮಾಡುವಾ ಬಿನ್ನಹವೇನೆಂದರೆ, ಕೆಳಗೆ ಬರೆದ ನಾಲ್ಕು ಪಂಗ್ತಿಗಳನ್ನು ತಮ್ಮ ಮನೋಹರವಾದ ಮಠಪತ್ರಕದಲ್ಲಿ ಪ್ರಸಿದ್ಧಿಸುವಿರೆಂದು ಮಹತ್ವಾಕಾಂಕ್ಷೆಯನ್ನು ಧರಿಸಿದ್ದೇವೆ. ಈ ಬಂಕಾಪುರ ಸಾಲಿಯ ಸ್ಥಾಪನವು ತಾರೀಖು 9ನೇ ಜೂನ್ 1848ನೇ ಇಸವಿ ದಿವಸಾ ಗಂಗಾಧರ ಮಡಿವಾಳೇಶ್ವರ ಎಂಬುವವರಿಂದ ಸ್ಥಾಪಿಸಲ್ಪಟ್ಟಿತು. ಅವರು ಅಜಮಾಸು 7-8 ವರ್ಷದ ತನಕ ಈ ಗ್ರಾಮದಲ್ಲಿ ಮಾಸ್ತರ ಕೆಲಸವನ್ನು ಮಾಡಿ ಕೈಲಾದ ಮಟ್ಟಿಗೂ ಪ್ರಯತ್ನ ಮಾಡಿ ಈ ಸಾಲಿಯನ್ನು ಉತ್ತಮ ಸ್ಥಿತಿಗೆ ತಂದು ಬಹು ಜನರನ್ನು ಯೋಗ್ಯ ಮಾರ್ಗಕ್ಕೆ ಹಚ್ಚಿದರು. ಆ ನಂತರ ಬಂದಂಥಾ ಮಾಸ್ತರರು ಕೆಲ ಕೆಲವು ದಿವಸಾ ಈ ಗ್ರಾಮದಲ್ಲಿ ವಾಸಮಾಡಿ ತಮ್ಮ ಕೈಲಾದ ಮಟ್ಟಿಗೂ ಶ್ರಮಪಟ್ಟು ಮೊದಲಿನ ಸ್ಥಿತಿಯನ್ನು ಕೆಡಿಸಿ ಸಾಲಿಯನ್ನು ಬಂದು ಸುದ್ಧಾ ಮಾಡಿಸಿಬಿಟ್ಟರು."

## ಗ್ರಂಥಋಣ

1) ಹೊಸಗನ್ನಡ ಸಾಹಿತ್ಯದ ಉದಯಕಾಲ
—ಡಾ. ರಾ.ಯ. ಧಾರವಾಡಕರ

2) ಹೊಸಗನ್ನಡದ ಅರುಣೋದಯ
—ಡಾ. ಶ್ರೀನಿವಾಸ ಹಾವನೂರ

3) ಬಾಣ ಕಾದಂಬರಿ

4) ಜೀವನ ಶಿಕ್ಷಣ (ಮಾಸಪತ್ರಿಕೆ) ಜನವರಿ 1978

## ವ್ಯಕ್ತಿ ಋಣ

1) ಶ್ರೀ ಬ.ಗಂ. ತುರಮರಿ
2) ಶ್ರೀ ಶಿವಶಂಕರ ಹಿರೇಮಠ





# ಕನ್ನಡನಾಡು ಮತ್ತು ಕನ್ನಡಿಗರ ಪರಂಪರೆ ಮಾಲೆಯ ಇತ್ತೀಚಿನ ಪ್ರಕಟಣೆಗಳು

ಕುಕ್ಕೇ ಸುಬ್ರಹ್ಮಣ್ಯ —ರಸಿಕ ಪುತ್ತಿಗೆ

ದಕ್ಷಿಣ ಕನ್ನಡದ ಕುಡುಬಿಯರು —ಈಶ್ವರ ಎನ್. ಜೋಷಿ

ಗುಮ್ಮನಾಯಕನ ಪಾಳಯದ ಪಾಳೆಯಗಾರರು —ಡಾ. ಎಚ್. ಎಸ್. ಸುಜಾತಾ

ಕರ್ನಾಟಕದ ಜಲಪಾತಗಳು —ಆರ್. ಜಿ. ರಾಯಕರ

ಸಜ್ಜಲಗುಡ್ಡದ ಶ್ರೀ ಶರಣಮ್ಮನವರು —ಗಿರಿರಾಜ ಹೊಸಮನಿ ಕಂಬಳಿಹಾಳ

ಕುಂಭಾಸಿ —ಎಂ. ಗೋಪಾಲಕೃಷ್ಣ ರಾವ್

ಸಂತಮೇರಿ ದ್ವೀಪ —ಎಂ. ಗೋಪಾಲಕೃಷ್ಣ ರಾವ್

**ಪ್ರತಿ ಪುಸ್ತಕದ ಬೆಲೆ ರೂ. 2–00**

